*ಕನಕದಾಸ ಅಧ್ಯಯನ ಕೇಂದ್ರ ಸಾಹಿತ್ಯ ಸರಣಿ–*

# ಕನಕ ತರಂಗಿಣಿ

ಪ್ರಧಾನ ಸಂಪಾದಕ
**ಕಾ ತ ಚಿಕ್ಕಣ್ಣ**
ಸಂಪಾದಕ
**ಎ. ಸುಂದರಮೂರ್ತಿ**

ಪ್ರಕಾಶಕರು
**ರಾಷ್ಟ್ರೀಯ ಸಂತಕವಿ ಕನಕದಾಸ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ**
2ನೆಯ ಮಹಡಿ, ಚಾಲುಕ್ಯ ವಿಭಾಗ, ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು–02
ದೂರವಾಣಿ: 080–22113147, E-mail: kanakaresearchcentre@gmail.com
web: www.saintpoetkanaka.in

**ಕನಕ ತರಂಗಿಣಿ**

ರಚನೆ : **ಎ. ಸುಂದರಮೂರ್ತಿ**

ಪ್ರಧಾನ ಸಂಪಾದಕ : **ಕಾ ತ ಚಿಕ್ಕಣ್ಣ**

ಪ್ರಕಾಶಕರು : **ವಿ. ಎನ್. ಮಲ್ಲಿಕಾರ್ಜುನ ಸ್ವಾಮಿ**
ಸದಸ್ಯ ಕಾರ್ಯದರ್ಶಿ, ರಾಷ್ಟ್ರೀಯ ಸಂತಕವಿ ಕನಕದಾಸ
ಅಧ್ಯಯನ ಮತ್ತು ಸಂಶೋಧನಾ ಕೇಂದ್ರ
2ನೆಯ ಮಹಡಿ, ಚಾಲುಕ್ಯ ವಿಭಾಗ, ಕನ್ನಡ ಭವನ, ಜೆ.ಸಿ. ರಸ್ತೆ
ಬೆಂಗಳೂರು–02, ದೂರವಾಣಿ: 080–22113147
E-mail: kanakaresearchcentre@gmail.com
web: www.saintpoetkanaka.in

ಮೊದಲ ಮುದ್ರಣ : 2015

ಹಕ್ಕುಗಳು : ರಾಷ್ಟ್ರೀಯ ಸಂತಕವಿ ಕನಕದಾಸ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ

ಪುಟಗಳು : x + 216 = 226

ಪ್ರತಿಗಳು : 1000

ಆಕಾರ : 1/4 ಕ್ರೌನ್

ಒಳಪುಟ ಕಾಗದ : 70 ಜಿ.ಎಸ್.ಎಂ. ಮ್ಯಾಪ್‌ಲಿಥೊ

ಬೆಲೆ : ₹

ಮುದ್ರಣ
ಇಳಾ ಮುದ್ರಣ
ನಂ. 36, 40 ಅಡಿ ರಸ್ತೆ
ರಾಘವನಗರ, ನ್ಯೂ ಟಿಂಬರ್‌ಯಾರ್ಡ್ ಲೇಔಟ್
ಬೆಂಗಳೂರು –560 026
ದೂರವಾಣಿ : 26757159

# ಮುನ್ನುಡಿ

ಕೀರ್ತನಾ ಸಾಹಿತ್ಯದಲ್ಲಿ ಕನಕದಾಸರ ಹೆಸರು ವಿಶಿಷ್ಟವಾದುದು. ತಮ್ಮ 300ಕ್ಕೂ ಹೆಚ್ಚು ಕೀರ್ತನೆಗಳು 4 ಕಾವ್ಯ–ಕೃತಿಗಳ ಮೂಲಕ ಕನಕದಾಸರು ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದವರು. ಸಾಮಾಜಿಕ, ಪಾರಮಾರ್ಥಿಕ ಚಿಂತನೆಗಳನ್ನು ತಮ್ಮ ಕಾವ್ಯ–ಕೀರ್ತನೆಗಳಲ್ಲಿ ಬಹು ಕಲಾತ್ಮಕವಾಗಿ ಅಷ್ಟೇ ನಿಚ್ಚಳವಾಗಿ ನಿರೂಪಿಸಿದ ಹಿರಿಮೆ ಅವರದು. ಕನಕದಾಸರ ವಿಶೇಷವೆಂದರೆ ತಮ್ಮ ಕೀರ್ತನೆಗಳ ಮೂಲಕ ಸಂಗೀತ ಕ್ಷೇತ್ರಕ್ಕೂ ಗಣನೀಯ ಕೊಡುಗೆಯನ್ನು ನೀಡಿದ್ದಾರೆ. ಕನಕದಾಸರ ಕೀರ್ತನೆಗಳು ಸಾಹಿತ್ಯಕ ಮೌಲ್ಯ ಹೊಂದಿರುವಂತೆ ಸಂಗೀತದ ಲಯವನ್ನು ಕೂಡ ಹೊಂದಿವೆ. ಬಾಗಿಲನು ತೆರೆದು ಸೇವೆಯನು ಕೊಡೊ ಹರಿಯೆ, ತೊರೆದು ಜೀವಿಸಬಹುದೇ, ಕುಲಕುಲವೆಂದು ಹೊಡೆದಾಡದಿರಿ, ದಾಸದಾಸರ ಮನೆಯ ದಾಸ ನಾನು ಮುಂತಾದ ಕೀರ್ತನೆಗಳು ಸಂಗೀತಪ್ರಿಯರ ಮನೆಮಾತಾಗಿವೆ.

ಹೀಗೆ, ಕನಕದಾಸರ ಸುಮಾರು ನೂರು ಕೀರ್ತನೆಗಳಿಗೆ ಸ್ವರಪ್ರಸ್ತಾರ ಹಾಕಿ ಅವುಗಳು ಸಂಗೀತ ಶಾಲೆಗಳು, ಸಂಗೀತಾಸಕ್ತರು, ಸ್ವರ ಸಂಯೋಜಕರಿಗೆ ಸುಲಭವಾಗಿ ಲಭ್ಯವಾಗಬೇಕೆಂದು 'ಕನಕ ತರಂಗಿಣಿ' ಎಂಬ ಪುಸ್ತಕವನ್ನು ಹೊರತರಲಾಗಿದೆ. ಈಗಾಗಲೇ ರಾಗ ಸಂಯೋಜನೆ ಗೊಂಡು ಗಾಯನದಲಲಿ ಪ್ರಚಲಿತವಿರುವ ಕೀರ್ತನೆಗಳು ಹಾಗೂ ಇತರೆ ಕೆಲವು ಕೀರ್ತನೆಗಳನ್ನು ಇಲ್ಲಿಗೆ ಆಯ್ಕೆ ಮಾಡಲಾಗಿದೆ.

ಹಿರಿಯ ವಿದ್ವಾಂಸರಾದ ಶ್ರೀ ಎ. ಸುಂದರಮೂರ್ತಿ ಅವರು ಸ್ವರಪ್ರಸ್ತಾರ ಕಾರ್ಯವನ್ನು ಪ್ರೀತಿಯಿಂದ ನಿರ್ವಹಿಸಿಕೊಟ್ಟಿದ್ದಾರೆ. ಜೊತೆಗೆ ತಾವೇ ಅಕ್ಷರ ಜೋಡಣೆಯನ್ನೂ ಮಾಡಿ ಹಸ್ತಪ್ರತಿಯನ್ನು ಸಿದ್ಧಪಡಿಸಿಕೊಟ್ಟಿದ್ದಾರೆ. ಇವರ ಶ್ರಮಕ್ಕೆ ಕೇಂದ್ರವು ಆಭಾರಿಯಾಗಿದೆ.

ರಾಗಸಂಯೋಜಿಸಿದ್ದ ಕೀರ್ತನೆಗಳ ಸಂಗ್ರಹ ಕಾರ್ಯದಲ್ಲಿ ಸಂಚಾಲಕರಾಗಿ ಗಾಯಕರಾದ ಶ್ರೀ ಎಚ್. ಫಲ್ಗುಣ ಅವರು ಮತ್ತು ಸಹಕಾರ ನೀಡಿದ ಪಂಡಿತರಾದ ಶ್ರೀ ಎಂ. ಆರ್. ಸತ್ಯನಾರಾಯಣ ಅವರ ನೆರವು ಸ್ಮರಣಾರ್ಹ. ಈಗಾಗಲೇ ರಾಗ ಸಂಯೋಜನೆಗೊಂಡು ಮಾರುಕಟ್ಟೆಯಲ್ಲಿ ಪ್ರಚಲಿತವಿರುವ ಕೀರ್ತನೆಗಳ ಗಾಯಕರು ಹಾಗೂ ಸಿ.ಡಿ. ರೂಪದಲ್ಲಿ ಹೊರತಂದ ಸಂಸ್ಥೆಗಳ ಸಹಕಾರವನ್ನು ಅತ್ಯಂತ ಕೃತಜ್ಞತೆಯಿಂದ ನೆನೆಯುತ್ತೇನೆ. 'ಕನಕತರಂಗಿಣಿ' ಕೃತಿ ಪ್ರಕಟಣೆಗೆ ಪ್ರೋತ್ಸಾಹ ನೀಡಿದ ಅಧ್ಯಯನ ಕೇಂದ್ರದ ಅಧ್ಯಕ್ಷರು, ಸದಸ್ಯ–ಕಾರ್ಯದರ್ಶಿ ಹಾಗೂ ಸದಸ್ಯರಿಗೆ ಮತ್ತು ಕೇಂದ್ರದ ಸಿಬ್ಬಂದಿ ಸ್ನೇಹಿತರಿಗೆ ವಂದನೆಗಳು–ಮುಖಪುಟ ಚಿತ್ರದ ಕಲಾವಿದರಾದ ಶ್ರೀ ಬಿ. ಎಸ್. ದೇಸಾಯಿ ಅವರಿಗೆ ವಿನ್ಯಾಸಗೊಳಿಸಿದ ಶ್ರೀ ಕೃಷ್ಣ ರಾಯಚೂರು ಹಾಗೂ ಮುದ್ರಿಸಿದ ಇಳಾ ಮುದ್ರಣ ಇವರಿಗೆ ನೆನೆಕೆಗಳು.

**–ಕಾ ತ ಚಿಕ್ಕಣ್ಣ**

ಸಮನ್ವಯಾಧಿಕಾರಿ

# ಅಧ್ಯಕ್ಷರ ಮಾತು

ರಾಷ್ಟ್ರೀಯ ಸಂತಕವಿ ಕನಕದಾಸ ಅಧ್ಯಯನ ಮತ್ತು ಸಂಶೋಧನಾ ಕೇಂದ್ರವು ಕನಕದಾಸರ ಜೀವನದರ್ಶನ ಮತ್ತು ಅವರ ಕಾವ್ಯ – ಕೀರ್ತನೆಗಳ ಕುರಿತು ಅಧ್ಯಯನ, ಸಂಶೋಧನೆ, ಪ್ರಕಟಣೆ ಮತ್ತು ಪ್ರಸಾರ ಕಾರ್ಯಗಳನ್ನು ಕೈಗೆತ್ತಿಕೊಂಡಿದೆ. ಈ ಬಗೆಯ ಕಾರ್ಯಾಧ್ಯಯನಗಳಿಗೆ ಯುವ ಸಮುದಾಯವನ್ನು ತೊಡಗಿಸಿಕೊಳ್ಳುವುದು ಇದರ ಆಶಯವಾಗಿದೆ. ಈ ನೆಲೆಯಲ್ಲಿ ಹೊಸ ಹೊಸ ದೃಷ್ಟಿಕೋನದಿಂದ ಅಧ್ಯಯನಶೀಲ ವಿದ್ವಾಂಸ, ಸಂಶೋಧನಾರ್ಥಿಗಳಿಗೆ ಫೆಲೋಶಿಪ್ ನೀಡಿಕೆ, ಅಧ್ಯಯನಗಳಿಗೆ ಅನುದಾನ, ರಾಜ್ಯ–ರಾಷ್ಟ್ರಮಟ್ಟದಲ್ಲಿ ವಿಚಾರ ಸಂಕಿರಣ–ಸಂವಾದಗೋಷ್ಠಿಗಳ ಏರ್ಪಾಟು, ವಿವಿಧ ಮಾಧ್ಯಮಗಳಲ್ಲಿ ಕನಕದಾಸರ ತತ್ವಾದರ್ಶಗಳ ಪ್ರದರ್ಶನ–ಪ್ರಸಾರ ಕಾರ್ಯ, ವಿವಿಧ ಭಾಷೆಗಳಿಗೆ ಕನಕದಾಸರ ಸಮಗ್ರ ಸಾಹಿತ್ಯ ಅನುವಾದ, ತೌಲನಿಕ ಅಧ್ಯಯನದ ಹಿನ್ನೆಲೆಯಲ್ಲಿ ಕಾರ್ಯಕ್ರಮಗಳು, ಕರ್ನಾಟಕ ತತ್ವಪದಕಾರರ ಸಮಗ್ರ ಸಾಹಿತ್ಯ ಪ್ರಕಟಣೆ, ಯುವಜನ – ವಿದ್ಯಾರ್ಥಿ ಸಮುದಾಯಕ್ಕಾಗಿ ಕನಕ ಸಂಸ್ಕೃತಿ ಕಮ್ಮಟ–ರಸಗ್ರಹಣ ಶಿಬಿರಗಳ ಸಂಘಟನೆ, ಹಿರಿಯ ಹಾಗೂ ಯುವ ವಿದ್ವಾಂಸರಿಗೆ ಪುರಸ್ಕಾರ ಮುಂತಾದ ಹಲವಾರು ರಚನಾತ್ಮಕ ಯೋಜನೆಗಳನ್ನು ರೂಪಿಸಿಕೊಂಡು ಜಾರಿಗೊಳಿಸುತ್ತಿದೆ.

ಪ್ರಸ್ತುತ ಕನಕತರಂಗಿಣಿ ಎಂಬ ಸಂಗೀತಗಾರರಿಗೆ ಅನುಕೂಲವಾಗುವ ಕೃತಿಯೊಂದನ್ನು ಪ್ರಕಟಿಸಲಾಗುತ್ತಿದೆ. ಈ ಕೃತಿಯು ಸಂಗೀತ ಶಾಲೆಗಳು, ಸಂಗೀತ ಗುರುಗಳು ಹಾಗೂ ಸ್ವರ ಸಂಯೋಜಕರಿಗೆ ಅನುಕೂಲವಾಗುತ್ತದೆ. ಈ ಕೃತಿಯಲ್ಲಿ 100 ಕೀರ್ತನೆಗಳನ್ನು ಆಯ್ದು ಹಿರಿಯ ವಿದ್ವಾಂಸರಾದ ಶ್ರೀ ಎ. ಸುಂದರಮೂರ್ತಿ ರವರು ಸ್ವರಪ್ರಸ್ತಾರ ಹಾಕಿಕೊಟ್ಟಿದ್ದಾರೆ. ಈ ಪುಸ್ತಕವು ಹೊರ ಬರಲು ಅಧ್ಯಯನ ಕೇಂದ್ರದ ಸಮನ್ವಯಾಧಿಕಾರಿಗಳಾದ ಕಾ ತ ಚಿಕ್ಕಣ್ಣ ರವರು ಶ್ರಮವಹಿಸಿದ್ದಾರೆ. ಈಗಾಗಲೇ ರಾಗ ಸಂಯೋಜನೆಗೊಂಡು ಪ್ರಚಾರ ನೀಡಿರುವ ಎಲ್ಲ ಗಾಯಕರ ಸಹಕಾರವನ್ನು ಇಲ್ಲಿ ನೆನೆಯುತ್ತೇನೆ.

ಸಂಗೀತಾಭಿಮಾನಿಗಳು ಪುಸ್ತಕದ ಪ್ರಯೋಜನವನ್ನು ಪಡೆಯುವರೆಂದು ಭಾವಿಸುತ್ತೇನೆ.

ದಿನಾಂಕ:

**ಕೆ. ಎ. ದಯಾನಂದ**

ಅಧ್ಯಕ್ಷರು

# ಪ್ರಸ್ತಾವನೆ

ಕನಕದಾಸರು ಮೊದಲಿಗೆ ದಣ್ಣಾಯಕರಾಗಿ ಅಪ್ರತಿಮ ವೀರರಾಗಿದ್ದಂತೆ ಕಾವ್ಯರಚನೆಯಲ್ಲಿಯೂ ಜನಪ್ರಿಯರಾದವರು. ಆಡುಮುಟ್ಟದ ಸೊಪ್ಪಿಲ್ಲ ಎಂಬಂತೆ ಕನಕರು ತೋರದ ಭಕ್ತಿ, ರೀತಿಗಳಿಲ್ಲ ಅವರ ಕಾವ್ಯಗಳು ಮೋಹನ ತರಂಗಿಣಿ ನಳಚರಿತ್ರೆ, ರಾಮಧಾನ್ಯ ಚರಿತ್ರೆ ಮತ್ತು ಹರಿಭಕ್ತಿಸಾರ ಬಹು ಪ್ರಸಿದ್ಧವಾದವು. ಕಾಲಾಂತರದಲ್ಲಿ ದೈವ ನಿಯಾಮಕವಾಗಿ ಸೋತು, ದಣಿದು ನೂರಕ್ಕೆ ನೂರು ಭಕ್ತಿ ಪುರಸ್ಸರರಾಗಿ, ಸರ್ವೇಂದ್ರಿಯಗಳಲ್ಲೂ, ಧಮನಿ, ಧಮನಿಗಳಲ್ಲೂ, ಕಣ ಕಣಗಳಲ್ಲೂ ದೈವವನ್ನು ಕಂಡ ಕನಕರು, ತಾವಾಗಿ ಹೊಮ್ಮಿದ ಗೇಯ ಪದಗಳು ಕನಕನಾಯಕನನ್ನು ಕನದಾಸರನ್ನಾಗಿಸಿತು. ಮೊದಲೇ ಕವಿಯಾಗಿದ್ದವರು ಭಕ್ತಿಯ ಸೆಲೆಯಲ್ಲಿ ವಿಜೃಂಭಿಸಿದುದು ಕೇವಲ ಯತಾರ್ಥವಾಗಿತ್ತು. ಅಗ್ರಗಣ್ಯ ದಾಸರಲ್ಲಿ ಒಬ್ಬ ಮುಖ್ಯರಾಗಿ, ವ್ಯಾಸರ ಪ್ರಿಯ ಶಿಷ್ಯರಾಗಿಯೂ ಪ್ರಜ್ವಲಿಸಿದವರು ಕನಕದಾಸರು.

ಒಂದು ಕಡೆ ಕಾವ್ಯ ಸಿರಿಯ ಒಡೆಯನಾಗಿ ಮತ್ತೊಂದು ಕಡೆ ಮುಗ್ಧ ಜನರೂ ತಿಳಿದುಕೊಳ್ಳಬಹುದಾದಂತಹ ಅರ್ಥಪೂರ್ಣ ಕ್ಲಿಷ್ಟ ವಿಷಯಗಳನ್ನು ತನ್ನದೇ ಆದ ಆಡು ಭಾಷೆಯಲ್ಲಿ ಲೌಕಿಕ ನಡೆಯಲ್ಲಿ ವಿಶದೀಕರಿಸಿದವರು. ದಾಸರಲ್ಲಿ ಬಾಡದ ಕನಕದಾಸರ ಕೃತಿಗಳು ಎಂದೂ ಬಾಡವು.

ಕನಕರ ರಚನೆಗಳಲ್ಲಿ, ಗುರು, ದೇವತಾಸ್ತುತಿ, ಜ್ಞಾನ, ಭಕ್ತಿ, ವೈರಾಗ್ಯ, ವೈಚಾರಿಕತೆ, ತತ್ವ ಮೊದಲಾದ ಎಲ್ಲ ಭಾಗಗಳೂ ಸಿಗುತ್ತವೆ, ಅದರಲ್ಲೂ ಅವರ ಅನುಭಾವದ ನಿಗೂಢ ಮುಂಡಿಗೆಗಳು, ಉಗಾಭೋಗಗಳು ವೈಚಾರಿಕತೆಯ ಪರಮಾವಧಿ. ಅವರೆಷ್ಟು ರಚಿಸಿದ್ದರೋ ಏನೋ, ಆದರೆ ನಮಗೆ ಈಗ ಸಿಕ್ಕಿರುವುದೇ ನಮ್ಮ ಭಾಗ್ಯ.

"ಕನಕ ತರಂಗಿಣಿ"ಯಲ್ಲಿ ಸುಲಭ ಗೇಯ ಪದಗಳಲ್ಲಿ, ನೂರು ಗೀತೆಗಳನ್ನು ಆರಿಸಿ, ಅವಕ್ಕೆ ತಾಳ ರಾಗ ಸಮೇತ ಸ್ವರ ಪ್ರಸ್ತಾರ ನೀಡಲ್ಪಟ್ಟಿದೆ. ಈ ಕೀರ್ತನೆಗಳನ್ನು ಹೀಗೆಯೇ ಹಾಡಬೇಕೆಂಬ ನಿಯಮವಿಲ್ಲ. ಕನಕರು ಹಾಡಿದ ಮೆಟ್ಟು ಗೊತ್ತಿಲ್ಲ. ಹೀಗಾಗಿ ಎಲ್ಲ ದಾಸರ ಹಾಡುಗಳನ್ನು ಹೆಸರಾಂತ ಗಾಯಕರು ಮನದಟ್ಟು ಮಾಡಿಕೊಂಡಂತೆ ಸಂಯೋಜನೆಗಳನ್ನು ಹಾಡಿದ್ದಾರೆ. ಇದೇ ರೀತಿಯಲ್ಲಿ ಹಾಡುವಿಕೆಯು ಮುಂದುವರೆದಲ್ಲಿ ಜನಸ್ತೋಮದಲ್ಲಿ ಅಭ್ಯಾಸವಾದಾಗ ನೂರ್ಕಾಲ ಸ್ಮರಣೆಯಲ್ಲಿ ಉಳಿಯಬಹುದು. "ಕನಕ ತರಂಗಿಣಿ" ಹಲವು ಹಾಡುಗಳು ಮಾರುಕಟ್ಟೆಯಲ್ಲಿಯೂ ದೊರೆಯುತ್ತವೆ. ಇವುಗಳು ಮೊದಲನೆಯ ಭಾಗದಲ್ಲಿ ಇವೆ.

ವಿವಾದಿ ರಾಗಗಳಲ್ಲಿ ಅಂದರೆ ಸಾಧಾರಣ ವಾದ್ಯಗಳಲ್ಲಿ ನುಡಿಸಲು ಕ್ಲಿಷ್ಟವಾದ ವಿವಾದಿ ರಾಗಗಳು ವಾಗಧೀಶ್ವರಿ,

ಆನಂದನಟಿನಿ ಮುಂತಾದ ರಾಗಗಳಲ್ಲದೆ ಅದಿತಿ ಮತ್ತು 'ಕನಕಮಣಿ' ಎಂಬ ಹೊಸ ರಾಗಗಳಲ್ಲೂ ಕೀರ್ತನೆಗಳಿವೆ. ಜೊತೆಗೆ ಸಾಧಾರಣವಾಗಿ ಬಳಕೆಯಲ್ಲಿಲ್ಲದ ಓಂಕಾರಿ, ಕರಪಾಣಿ, ಕಮಲ, ತಾರವ, ಭೈರವ, ವಾಸಂತಿ, ಸಲ್ಲಾಪ, ಸಾವಿತ್ರಿ ಎಂಬ ರಾಗಗಳನ್ನು ಇಲ್ಲಿ ಕಾಣಬಹುದು. ಕರ್ನಾಟಕ ಸಂಗೀತದ ರೀತಿಯಲ್ಲಿ ಸ್ವರ ಪ್ರಸ್ತಾರವನ್ನೀಯಲಾಗಿದೆ. ಸಾಕಷ್ಟು ಹಿಂದುಸ್ತಾನೀ ರಾಗಗಳೂ ಇಲ್ಲಿವೆ. ಹೆಸರಾಂತ ನಿರ್ದೇಶಕರುಗಳಲ್ಲದೆ, ಅಷ್ಟೇ ಖ್ಯಾತಿಯುಳ್ಳ ಹಾಡುಗಾರರೂ ಮನಮುಟ್ಟಿ ಹಾಡಿರುವ ಕೀರ್ತನೆಗಳೂ ಇಲ್ಲಿ ಸಿಗುತ್ತವೆ. ಕೆಲವು ಹಾಡುಗಳು ಜಾನಪದ ಶೈಲಿಯಲ್ಲಿಯೂ, ಒಂದು ಹಾಡು ರವೀಂದ್ರ ಸಂಗೀತ್ ಶೈಲಿಯಲ್ಲಿಯೂ ಇದ್ದು, ಕೆಲವು ಗೀತ ಚಿತ್ರಗಳು ಇವೆ.ಜನಮನದಲ್ಲಿ ಇವು ಉಳಿಯುತ್ತವೆ ಎಂಬ ಭರವಸೆ ಇದೆ ಮತ್ತು ಅವುಗಳಿಂದ ಜನಸ್ತೋಮದಲ್ಲಿ ಪ್ರಸ್ತುತ ಕಾಲದಲ್ಲಿ ಒಳ್ಳೆಯ ವಾತಾವರಣವೇರ್ಪಡಲು ಈ ಕೀರ್ತನೆಗಳಲ್ಲಿರುವ ವಿಷಯ ಸಹಾಯಕವಾಗಬಹುದೆಂಬ ನಿರೀಕ್ಷೆ ಇದೆ.

ಈ ಕೃತಿಗಳ ಸ್ವರ ಪ್ರಸ್ತಾರವನ್ನು ಮಾಡುವ ಕಾರ್ಯ ನನ್ನ ಭಾಗ್ಯ. ಮೊದಲೇ ಕನಕದಾಸರನ್ನು ಹಚ್ಚಿಕೊಂಡವ ನಾನು. ಅದರ ಜೊತೆಗೆ ಎರಡನೆಯ ಭಾಗದ ಕೀರ್ತನೆಗಳ ರಾಗ ಸಂಯೋಜನೆಯನ್ನೂ ಮಾಡಬೇಕಾದ ಭಾಗ್ಯ ನನ್ನ ಪೂರ್ವ ಜನ್ಮದ ಸುಕೃತ. ಈಗ ಈ ನೂರು ಕೀರ್ತನೆಗಳ ವ್ಯಾಸಂಗ ನನಗೆ ಮತ್ತಷ್ಟು ಸಂತೋಷದೊಡನೆ, ಶಾಂತಿಯನ್ನು ಕೊಡುತ್ತಿದೆ. ಈ ಕಾರ್ಯವನ್ನು ನನಗೆ ಹಚ್ಚಿಕೊಟ್ಟ

ರಾಷ್ಟ್ರೀಯ ಸಂತಕವಿ ಕನಕದಾಸ ಅಧ್ಯಯನ ಮತ್ತು ಸಂಶೋಧನಾ ಕೇಂದ್ರದವರಿಗೆ ವಿಶೇಷವಾಗಿ ಇದರ ಸಮನ್ವಯಾಧಿಕಾರಿಯಾದ ಕನ್ನಡದ ಖ್ಯಾತ ಸಾಹಿತಿ ಶ್ರೀ ಕಾ ತ ಚಿಕ್ಕಣ್ಣನವರಿಗೆ ನಾನು ಅಭಾರಿ.

**ಎ. ಸುಂದರಮೂರ್ತಿ**

## ಪರಿವಿಡಿ

## ಪರಿವಿಡಿ

ಪರಿವಿಡಿ

## ಪರಿವಿಡಿ

# ಅಟ್ಟು ಇಕ್ಕದವರ ಮನೆಯ

ಅಟ್ಟು ಇಕ್ಕದವರ ಮನೆಯ

ಅಟ್ಟು ಇಕ್ಕದವರ ಮನೆ ಪಾಯಸ ಕಜ್ಜಾಯವ
ಅಟ್ಟರೇನು ಅಟ್ಟದಿದ್ದರೇನು

ನಿಚ್ಚಣಿಗೆ ದೋಟಿಗೆ ನಿಲುಕದ ಹಣ್ಣಿನ ವೃಕ್ಷ
ನಿಚ್ಚ ನಿಚ್ಚವು ಬಾಗಿ ಫಲವಾದರೇನು
ಔಚಿತ್ಯ ವಿದ್ಯೆಯನರಿಯದ ದೊರೆ ತಾನು
ಮೆಚ್ಚಿದರೇನು ಮೆಚ್ಚದಿದ್ದರೇನು

ದಾರಿದ್ರ್ಯಕ್ಕೊದಗದ ದ್ರವ್ಯ ಪದಾರ್ಥದ
ಏರಿ ಇದ್ದರೇನು ಪರ್ವತವಿದ್ದರೇನು
ಶರೀರ ಸೌಖ್ಯ ಶಮನಕ್ಕಾಗದ ಹೆಣ್ಣು
ಊರಲಿದ್ದರೇನು ತೌರೂರಲಿದ್ದರೇನು

ಉರಗಾದ್ರಿವಾಸ ನಾರಾಯಣಾದಿಕೇಶವನ
ಚರಣಕಮಲವನು ಸೇರಿಕೊಳ್ಳದೆ
ವರ–ಶಾಪವಿಲ್ಲದ ಬಣಗು ದೈವಂಗಳಿಗೆ
ಶರಣೆಂದರೇನು ಶರಣೆನ್ನದಿದ್ದರೇನು ಕನಕ ತರಂಗಿಣಿ

ರಾಗ: ನಾಟಕಪ್ರಿಯ ಸ ರಿ ಗ ಮ ಪ ದ ನಿ ಸ ಏಕತಾಳ

। ,,ಪಾದ ನೀರಿ । ಸಸಾಸ ಸ ಸಸಾ ।
ಅ ಟ್ಟು ಇ ಕ್ಕ ದವ ರ ಮನೆಯ
। ,,ಸಾರಿ ಸನಿನಿ । ಸಸಾಸ ಸಾಸಾ । ಸಾನಿನಿದನಿಸಾ,ನಿ ದಾ । ಪಮಪದಾಪದನಿನಿದಪಾ ।
ಅ ಟ್ಟು ಇ ಕ್ಕ ದವ ರ ಮನೆ ಪಾ ಯಸ ಕಜ್ಜಾ ಯ ವ
। ,,ಪಾನಿ ದಪಾ । ಮಗರೀ,ಗಾಗ । ,,ರೀಗ ರಿಸಾ । ಸಾ,, ,,,, ।
ಅ ಟ್ಟರೇ ನು ಅ ಟ್ಟ ದಿದ್ದರೇ ನು

। ,,ಸಾರಿ ಸಸಾ । ಮಾ,,,ಮಮಾ । ,,ದದಾದದಾ । ದಪನಿ ದ ದಾದಾ ।
ನಿ ಚ್ಚಣಿಗೆ ದೋ ಟಿ ಗೆ ನಿಲು ಕದ ಹ ಣ್ಣಿನ ವೃಕ್ಷ
। ,,,ಮಾದ ನೀ । ಸ ರೀ ರೀ,ರೀ । ,,ಸನೀರೀ ಸ । ಸಾ,,,,ಸಾ ।
ನಿ ಚ್ಚ ನಿ ಚ್ಚವು ಬಾ ಗಿ ಫಲವಾದ ರೇ ನು
। ,,,ಸಾರೀಗ । ರಿಗಗ ಗ ಗಗಗ ಗ । ,,ರಿ ಗಾ ರಿಸಾ । ಸಾ,,,ನಿದಾ ।
ಔಚಿ ತ್ಯ ವಿ ದ್ಯೆಯನರಿಯದ ದೊರೆ ತಾ ನು
। ,,,ರೀ ಸಾನಿ । ನಿಸಸಾರಿಸನಿದದಪ । ,,ನೀ ದಪಾಮ । ಮಾಗಪಮಾಗಾರಿಗರಿಗ । ಸಾ
ಮೆಚ್ಚಿದ ರೇ ನು ಮೆಚ್ಚದಿ ದ್ದ ರೇ ನು

। ,,,ಸಾರೀಸ । ಮ ಮಾಮಮಾ,, । ,,,ದಾದಾ ದಾ । ದಪನಿದಾ ದದಾ ।
ದಾರಿ ದ್ರ್ಯ ಕ್ಕೊದ ಗ ದ ದ್ರ ವ್ಯ ಪ ದಾ ರ್ಥತದ
। ,,ಮಾದ ನೀರಿ । ರೀ,,,ಸನೀ । ನೀನಿ ನೀಸಾರಿ । ಸಾ,,,,ಸಾ ।
ಏ ರಿ ಇದ್ದ ರೇ ನು ಪರ್ವತ ವಿ ದ್ದ ರೇ ನು
। ,,ಸಾರಿಗಗಾ । ಗಾ,,,,ಗಾ । ಗಗಾಗಾಗಾ,, । ರಿಗಾ ರಿಸಾಸಾ ।
ಶ ರೀ ರ ಸೌ ಖ್ಯ ಶಮನ ಕ್ಕಾ ಗದ ಹೆ ಣ್ಣು
। ,,ಸಾ ರಿಸನಿನಿ । ನೀ,,ದಪ ಪಾ । ನೀ ದಪಾಮಾ । ಮಾಗಪಮಗರಿಗಸಾ ।
ಊರಲಿ ದ್ದ ರೇ ನು ತೌ ರೂರಲಿ ದ್ದ ರೇ ನು

। ,,ಸ ಸಾರೀ ಸ । ಮಾ,ಮಾ, ದಾ । ದಾ,ದ ದಾದಾ । ನಿದಾಸನೀನೀ ।
ಉರ ಗಾದ್ರಿ ವಾ ಸ ನಾ ರಾ ಯಣಾದಿ ಕೇ ಶವ ನ
। ,,ಮದಾನಿ ಸಾ । ರಿ ರೀರಿರೀ,, । ಸನಿನಿನಿಗರಿರಿಸ । ಸಾ,ಸಸಾ,, ।
ಚ ರ ಣ ಕ ಮಲ ವನು ಸೇ ರಿ ಕೊಳ್ಳದೆ
। ,,ಸಸಾ ರೀ ಗ । ಗಾ,ಗ ಗಾ,, । ರಿಗಾರೀ,ಸಾ । ಸಾ,ಸಸಾಸಾ ।
ವರ ಶಾಪ ವಿ ಲ್ಲದ ಬಣಗು ದೈ ವಂಗಳಿ ಗೆ
। ,,ಸರೀಸನಿನಿ । ನಿಸನಿಸರಿಸನಿದ ಪಪ । ಪಾನೀದಪಾಮಾ । ಮಾಗಪಮಗರಿಗಸಾ ।
ಶರ ಣೆಂದ ರೇ ನು ಶ ರ ಣೆ ನ್ನದಿ ದ್ದ ರೇ ನು

## ಅಜ್ಞಾನಿಗಳ ಕೂಡೆ

ಅಜ್ಞಾನಿಗಳ ಕೂಡೆ ಅಧಿಕ ಸ್ನೇಹಕ್ಕಿಂತ
ಸುಜ್ಞಾನಿಗಳ ಕೂಡೆ ಜಗಳವೆ ಲೇಸು

ಉಂಬುಡುವುದಕಿಲ್ಲದರಸಿನೋಲಗಕಿಂತ
ತುಂಬಿದೂರೊಳಗೆತಿರಿದುಂಬುದೆ ಲೇಸು
ಹಂಬಲಿಸಿ ಹಾಳ್ಹರಟೆ ಹೊಡೆವುದಕಿಂತ–ಹರಿ
ಯೆಂಬ ದಾಸರಕೂಡೆ ಸಂಭಾಷಣೆಯೆ ಲೇಸು

ಒಡನೆ ಹಂಗಿಸುವನೋಗರವನುಂಬುದಕ್ಕಿಂತ
ಕುಡಿನೀರು ಕುಡಿದುಕೊಂಡಿರುವುದೆ ಲೇಸು
ಬಿಡದೆ ಬಾಂಧವರೊಡನೆ ಕಡಿದಾಡುವುದಕಿಂತ
ಅಡವಿಯೊಳಗಜ್ಞಾತ ವಾಸವೇ ಲೇಸು

ಮಸೆಯುತಿಹ ಮತ್ಸರದ ನೆರೆಯೊಳಿರುವುದಕಿಂತ
ಹಸನಿಲ್ಲದ ಹಾಳು ಗುಡಿಯೆ ಲೇಸು
ಬಿಸಜಾಕ್ಷ ಕಾಗಿನೆಲೆ ಆದಿಕೇಶವರಾಯ
ವಸುಮತಿಯೊಳು ನಿನ್ನ ದಾಸತ್ವವೇ ಲೇಸು

**ರಾಗ: ರೀತಿಗೌಳ** ಸ ರಿ ಗ ಮ ನಿ ದ ಮ ನಿ ನಿ ಸ ಸ ನಿ ದ ಮ ಗ ಪ ಮ ಗ ರಿ ಸ **ಖಂಡಛಾಪು**

। ,,ಸಾ,ನಿದಾಮಾ । ಗಮಪಾ ಮಾಪಮಗರಿಸಾ । ,,ಸಸಾರಿ ನೀಪಾ । ಪನೀ,ಸಾ,,ಸಾ ॥
**ಅ ಜ್ಞಾ ನಿ ಗ ಳ ಕೂ ಡೆ ಅಧಿಕ ಸ್ನೇ ಹ ಕ್ಕಿಂ ತ**
। ,,ಸನಿಸಸಗಾರೀ । ರಿಗಮಾ ಮಾ,ಪಮರಿ । ,,ಮಮಾಪನಿದಮಾ । ನೀ,,ಸನಿಸಾ,, ॥
**ಸು ಜ್ಞಾ ನಿ ಗ ಳ ಕೂ ಡೆ ಜ ಗ ಳವೆ ಲೇ ಸು**

। ,,,ಮಾ ಮಮಾಮಾ । ಮಾ,ಮಪಮಗರೀ । ,,ಮರೀಮಪಾ,, । ಮನಿಪಮಗರಿಸಾಸಾ ॥
**ಉಂಬುವು ದ ಕಿ ಲ್ಲ ದ ಅ ರ ಸಿ ನೋ ಲ ಗ ಕಿಂ ತ**
। ,,ಸರಿ ಸರಿಸನಿಪಾ । ಪಾಸನಿಸಾ ಸಾಸಾ । ,,ಸಸಾಮಗಾರೀ । ಮಾಗಾ ಮಾ,,ಮಾ ॥
**ತುಂಬಿ ದ ಊ ರೊಳ ಗೆ ತಿರಿ ದುಂ ಬು ವು ದೆ ಲೇ ಸು**
। ,,,ಸಾ ಸ ಸಾಸಾ । ನಿದನಿದ ನಿದಸನಿದ । ,,ಮ ಪಾನಿದಾಸಾ । ನಿಸಾ, ,,,,,, ॥
**ಹಂಬಲಿ ಸಿ ಹಾ ಳ್ ಹ ರ ಟೆ ಹೊಡೆ ವುದಕಿಂ ತ**
। ,,ಗರೀಸಾ, ಸಾ । ,,ದಸಾನಿದಾದಮ । ,ಮಾ ಸಾ,,ಗರಿಸಾ । ಮಗಮಾ ದನಿಸಾಸಾ ॥
**ಹರಿ ಯೆಂಬ ದಾ ಸರ ಕೂ ಡೆ ಸಂ ಭಾಷ ಣೆ ಯೆ ಲೇ ಸು**

। ,,ದದಾದ ದಾ,, । ದಾದಾದಮ ದಾನಿದ । ದನಿಸನಿದಾಮಾ,, । ಮಾಪಮಗರಿಸಾಸಾ ॥
**ಒಡ ನೆ ಹಂ ಗಿ ಸು ವ ನೋ ಗ ರ ವ ನುಂ ಬು ದ ಕ್ಕಿಂ ತ**
। ,,ಗ ಸಾಸದಾದಾ । ನಿದನಿದಸನಿನಿದದಾ । ಮಗಮಾನಿದದಾ,, । ಸಾಸನಿಸಾ,,,, ॥
**ಕುಡಿ ನೀ ರು ಕು ಡಿ ದು ಕೊಂ ಡಿ ರು ವು ದೆ ಲೇ ಸು**
। ,,ನಿದಾಮ ದಾನಿಸ । ಸನಿಸನಿಸಾ ಸಾಸಾ । ,,ನಿಸಾಸಗಾರೀ । ಗರಿಗರಿರಿಮಗರಿಸಾ ॥
**ಬಿಡ ದೆ ಬಾಂ ಧ ವ ರೊಡ ನೆ ಕಡಿ ದಾ ಡು ವು ದ ಕಿಂ ತ**
। ,,ನಿ ಸಾಗ ಸಾ,, । ಸನಿಸನಿದದಮಮಾ । ,,ಗಮಾಗಾಸಾ,, । ನಿದಮಾಗರಿಸನಿಸಾ ॥
**ಅಡ ವಿ ಯೊ ಳ ಗಜ್ಞಾ ತ ವಾ ಸ ವೇ ಲೇ ಸು**

। ,,ಮಮಾಮ ಮಾಮಾ । ಮಾ,,ಮಾಮಪಮಗ । ರೀಮಗಾ ಮಪಾಮ । ಮನಿಪಮಗರಿರಿಗಸಾ ॥
**ಮಸೆ ಯುತಿ ಹ ಮ ತ್ಸ ರ ದ ನೆ ರೆ ಯಲಿ ರು ವು ದ ಕಿಂ ತ**
। ,,ಸ ಸಸನೀನಿ । ನೀ,,ನಿದದಸನಿದ । ,,ಮಗಮಾಮನೀದಾ । ಸಾ,ನಿಸಾ,,,, ॥
**ಹಸ ನಿ ಲ್ಲ ದ ಹಾ ಳು ಗು ಡಿ ಯೆ ಲೇ ಸು**
। ,,ನಿಸಾಸಗಾಗಾ । ಮಗಮಾಮಾಮಗಗಾ । ಗಾ,,ಗಾಗರಿಗಾ । ಸನಿಸಾರಿಮಗರಿಸಾ ॥
**ಬಿಸ ಜಾ ಕ್ಷ ಕಾ ಗಿ ನೆ ಲೆ ಆ ದಿಕೇ ಶ ವ ರಾ ಯ**
। ,,ದದಾರಿ ಸಾ,, । ಸನಿ ರಿಸ ಸನಿನಿದದಮ । ,,ಸಮಾಗರೀಸಾ । ನಿದಮಾ ಗರಿಸನಿಸಾ ॥
**ವಸುಮತಿ ಯೊಳು ನಿ ನ್ನ ದಾ ಸ ತ್ವ ವೇ ಲೇ ಸು**

## ಆನೆಯ ನೋಡಿರಯ್ಯ

ಆನೆಯ ನೋಡಿರಯ್ಯ ನೀವೆಲ್ಲರು
ಆನಂದ ಪಡೆಯಿರಯ್ಯ
ತಾನು ತನ್ನವರೆಂಬ ಮಾನವರ ಸಲಹಿದ

ಆ ಪಾಂಡು ಚಕ್ರೇಶನ ಸುತರಿಗೊಲಿದಾನೆ
ಗಂಡುಗಲಿ ಮಾಗಧನ ವರಿಸಿದಾನೆ
ಹಿಂಡು ಗೋವಳರೊಳು ಹಿರಿಯನ ಕಳೆಯದಾನೆ
ಲಂಡರಿಗೆ ಎದೆಗೊಡುವ ಪುಂಡಾನೆ

ಬಾಲಕನ ನುಡಿಕೇಳಿ ಖಳನ ಸೀಳಿದಾನೆ
ಪಾಲುಂಡು ವಿದುರನ ಸಲಹಿದಾನೆ
ಲೋಲಾಕ್ಷಿಯ ಮಾನಭಂಗಕ್ಕೊದಗಿದಾನೆ
ಖೂಳ ಶಿಶುಪಾಲನನು ಸೀಳಿದಾನೆ

ಅಜಮಿಳನಿಗೆ ನಿಜಪದವಿಯ ಕೊಟ್ಟಾನೆ
ಕುಜನರೆಲ್ಲರನು ವರ್ಜಿಸಿದ ಆನೆ
ಅಜಪಿತ ಕಾಗೆನೆಲೆಯಾದಿಕೇಶವಾನೆ
ತ್ರಿಜಗವಲ್ಲಭ ತಾನು ಭಜಕರ ವಶದಾನೆ

**ರಾಗ: ಚಂದ್ರಕೌನ್ಸ್(ಕದರ)** ಸ ಗ ಮ ದ ನಿ ಸ **ತ್ರಿಶ್ರ ನಡೆ ಆದಿತಾಳ**

। ಮಾಮಮಾ, ಗಮ ಗಸಸಗ । ಮಾ,,,, । ಮಗಮದದದ ।। ಮಾದನೀನಿ ನಿ ಸ ಸ ಸಗನಿ । ಸಾ,,,, । ಸನಿದಮಗಸ ।।
**ಆ ನೆ ಯ ನೋಡಿ ರ ಯ್ಯ ನೀ ವೆ ಲ್ಲರು ಆ ನಂ ದ ಪಡೆಯಿರ ಯ್ಯ**

। ಮಾಮ ಮಾ,ಗ ಮಗಾ ಸಾ । ಮಾಮಮಮದ । ಗದಮಗಸಾ ।
**ತಾ ನು ತ ನ್ನವರೆಂಬ ಮಾನ ವ ರ ಸಲ ಹಿದ**

। ಮಾ ಮ ಮಾಮಾ,ಗಾಮಮಾ । ಮಮಮಮ ದಮ । ಗಮಾದಮಗಸಾ ।
**ಪಾಂಡು ಚ ಕ್ರೇ ಶ ನ ಸುತ ರಿ ಗೊಲಿ ದಾ ನೆ**

। ಗಾಮದನೀ ಸಾ ಸಸಸಾ । ನಿದದನೀ, । ಸಾ,,,, ।
**ಗಂಡುಗಲಿ ಮಾಗಧನ ವರಿಸಿದಾ ನೆ**

। ದಾ ನಿ ಸಗಗಗಗಗ ಗಾ, । ಗಗಗ ಮಗಗ । ಸನಿನಿ ಸಾ ಸ ।
**ಹಿಂಡು ಗೋವಳರೊಳು ಹಿರಿಯನ ಕಳೆಯದಾನೆ**

। ನಿಸಸಸಸಾ ನಿ ಸ ನಿ ದ ಮಾ । ಗಮಗಮದಮ । ಗಮಗಸನಿಸ ।
**ಲಂ ಡರಿಗೆ ಎದೆಗೊಡುವ ಪುಂ ಡಾ ನೆ**

**ಮೇಲಿನ ಚರಣದಂತೆ**

**ಬಾಲಕನ ನುಡಿಕೇಳಿ ಖಳನ ಸೀಳಿದಾನೆ**
**ಪಾಲುಂಡು ವಿದುರನ ಸಲಹಿದಾನೆ**
**ಲೋಲಾಕ್ಷಿಯ ಮಾನಭಂಗಕ್ಕೊದಗಿದಾನೆ**
**ಖೂಳ ಶಿಶುಪಾಲನನು ಸೀಳಿದಾನೆ**

**ಅಜಮಿಳನಿಗೆ ನಿಜಪದವಿಯ ಕೊಟ್ಟಾನೆ**
**ಕುಜನರೆಲ್ಲರನು ವರ್ಜಿಸಿದ ಆನೆ**
**ಅಜಪಿತ ಕಾಗೆನೆಲೆಯಾದಿಕೇಶವಾನೆ**
**ತ್ರಿಜಗವಲ್ಲಭ ತಾನು ಭಜಕರ ವಶವಾನೆ**

## ಆರು ಬದುಕಿದರಯ್ಯ

ಆರು ಬದುಕಿದರಯ್ಯ ಹರಿ ನಿನ್ನ ನಂಬಿ
ತೋರು ಈ ಧರೆಯೊಳಗೆ ಒಬ್ಬರನು ಕಾಣೆ ಕೃಷ್ಣ

ಕಲಹ ಬಾರದ ಮುನ್ನ ಕರ್ಣನೊಬ್ಬನ ಕೊಂದೆ
ಸುಲಭದಲಿ ಕೌರವರ ಮನೆಯ ಮುರಿದೆ
ನೆಲವ ಬೇಡಲು ಪೋಗಿ ಬಲಿಯ ಭೂಮಿಗೆ ತುಳಿದೆ
ಮೊಲೆಯನುಣ್ಣಲು ಪೋಗಿ ಪೂತನಿಯ ಕೊಂದೆ

ಕರುಳೊಳಗೆ ಕತ್ತರಿಯನಿಟ್ಟು ಹಂಸಧ್ವಜನ
ಸರಸದಿಂ ಮಗಳ ಗಂಡನ ಕೊಲಿಸಿದೆ
ಮರುಳಿನಿಂದಲಿ ಪೋಗಿ ಭೃಗುಮುನಿಯ ಕಣ್ಣೊಡೆದೆ
ಅರಿತು ನರಕಾಸುರನ ಹೆಂಡತಿಯ ತಂದೆ

ತಿರಿದುಂಬ ದಾಸರ ಕೈಯ ಕಪ್ಪವ ಕಟ್ಟಿಸಿಕೊಂಡೆ
ತಿರುಮಲಾಚಾರ್ಯ ಶ್ರೀಗುರುವೆ ಬಲ್ಲ
ವರ ಕಾಗಿನೆಲೆಯಾದಿ ಕೇಶವನ ಭಜಿಸಿದರೆ
ತಿರಿವೆನೆಂದರೆ ತಿರುಪೆ ಕೂಳ್ ಪುಟ್ಟದೈ ಕೃಷ್ಣ

**ರಾಗ: ಬೃಂದಾವನಿ ಸಾರಂಗ** ಸ ರಿ² ಮ¹ ಪ ನಿ² ಸ ಸ ನಿ² ಪ ಮ¹ ರಿ² ಸ **ಆದಿತಾಳ**

। ಪಾ,ಮ ರಿ ಮರಿ ಸ । ನಿಸಸಮ । ರೀ,, ॥ ಮರೀನೀ,ಪಾ ನೀ ಸಾ । ,,,, । ,,,, ॥
**ಆ ರು ಬದುಕಿದ ರ ಯ್ಯ ಹ ರಿ ನಿ ನ್ನ ನಂಬಿ**
। ರಿಮಾರಿ ಮಾ ಮಪಾಪ ಪಾಪಾ । ಪಾ,ಸ ನೀಪಾ । ಮನಿಪಮ ರಿಸರೀ ॥
**ತೋ ರು ಈ ಧ ರೆ ಯೊಳ ಗೆ ಒ ಬ್ಬರ ನು ಕಾ ಣೆ ಕೃಷ್ಣ**

। ,,ಮಪಾಮ ಮಾಪಪಾ ಪಾ,ಪಾ । ರಿಮರಿಮಪಮಮರಿ । ರೀರಿಮ ರೀ ಸಾ ॥
**ಕ ಲ ಹ ಬಾ ರದ ಮುನ್ನ ಕ ರ್ಣ ನೊ ಬ್ಬನ ಕೊಂದೆ**
। ,,ಮರಿ ರಿ ಮಮಾ ಪಾ,ಪಪಾಪಾ । ಪನಿನೀಸನಿಪಮ । ಮಪಮನಿಪಾನಿಪಮಪ ॥
**ಸುಲಭದ ಲಿ ಕೌ ರವ ರ ಮ ನೆ ಯ ಮು ರಿ ದೆ**
। ,,ಮಪಾನಿ ಸಾ ರಿ ರೀ ರೀ, ರೀ । ಮರೀಮರೀ ರೀ । ಸ ನೀ ರಿ ಸಾಸಾ ॥
**ನೆ ಲ ವ ಬೇಡಲು ಪೋಗಿ ಬ ಲಿ ಯ ಭೂ ಮಿಗೆ ತುಳಿ ದೆ**
। ,,ಪ ನೀಸ ರೀನಿ ಸಾ ನಿಪಾಪಾ । ಪಸಾಸನೀಪಾ । ಪನಿಪಮರಿಸರಿಮ ॥ ಪಾ
**ಮೊಲೆ ಯನುಣ್ಣಲು ಪೋ ಗಿ ಪೂ ತನಿ ಯ ಕೊಂ ದೆ**

। ಪಪಾಪ ಪಾಮಾ ಪಾ,ಪ ಪಾಮಾ । ರಿಮಮಮನಿಪ ಪಮ । ಮರೀಮರೀಸಾ ॥
**ಕ ರು ಳೊಳ ಗೆ ಕ ತ್ತರಿ ಯ ನಿ ಟ್ಟು ಹಂ ಸ ಧ್ವಜ ನ**
। ,,ರಿಸಾರೀಮಾ ಪಾಪಾಪಾ,, । ,,ಪಸಾನಿಪ । ಮಾಪಾಪಾಪಾ ॥
**ಸರ ಸ ದಿಂ ಮಗ ಳ ಗಂ ಡನ ಕೊಲಿ ಸಿ ದೆ**
। ,,ಮಪಾನಿಸಾ । ಸ ರೀ, ರೀ ರೀ । ಮ ರೀಮ ರೀನೀ । ನೀ,ಸ ಸಾಸಾ ॥
**ಮರುಳಿನಿಂ ದಲಿ ಪೋಗಿ ಭೃಗು ಮುನಿ ಯ ಕ ಣ್ಣೊಡೆ ದೆ**
। ,,ಸ ಸಾಸ ಸಸ । ನಿಸಾನಿ ಪಾಪಾ । ಪಸ ಸನಿನಿಪಪಮ । ಮನಿಪಮರಿಸರಿಮ ॥ ಪಾ
**ಅರಿ ತು ನರ ಕಾ ಸುರ ನ ಹೆಂ ಡ ತಿ ಯ ತಂ ದೆ**

**ಮೇಲಿನ ಚರಣಗಳಂತೆ**

**ತಿರಿದುಂಬ ದಾಸರ ಕೈಯು ಕಪ್ಪವ ಕಟ್ಟಿಸಿಕೊಂಡೆ**
**ತಿರುಮಲಾಚಾರ್ಯ ಶ್ರೀಗುರುವೆ ಬಲ್ಲ**
**ವರ ಕಾಗಿನೆಲೆಯಾದಿ ಕೇಶವನ ಭಜಿಸಿದರೆ**
**ತಿರಿವೆನೆಂದರೆ ತಿರುಪೆ ಕೂಳ್ ಪುಟ್ಟದೈ ಕೃಷ್ಣ**

## ಆರು ಬಾಳಿದರೇನು ಆರು ಬದುಕಿದರೇನು

ಆರು ಬಾಳಿದರೇನು ಆರು ಬದುಕಿದರೇನು
ನಾರಾಯಣನ ಸ್ಮರಣೆ ನಮಗಿಲ್ಲದನಕ

ಉಣ್ಣ ಬರದವರಲ್ಲಿ ಊರೂಟವಾದರೇನು
ಹಣ್ಣು ಬಿಡದ ಮರ ಹಾಳಾದರೇನು
ಕಣ್ಣಿಲ್ಲದವಗಿನ್ನು ಕನ್ನಡಿಯಿದ್ದು ಫಲವೇನು
ಪುಣ್ಯವಿಲ್ಲದವನ ಪ್ರೌಢಿಮೆ ಮೆರೆದರೇನು

ಅಕ್ಕರಿಲ್ಲದವಗೆ ಮಕ್ಕಳಿದ್ದು ಫಲವೇನು
ಹೊಕ್ಕು ನಡೆಯದ ನಂಟತನದೊಳೇನು
ರೊಕ್ಕವಿಲ್ಲದವಗೆ ಬಂಧುಗಳು ಇದ್ದರೇನು
ಮರ್ಕಟನ ಕೈಯೊಳಗೆ ಮಾಣಿಕ್ಯವಿದ್ದರೇನು

ಅಲ್ಪ ದೊರೆಗಳ ಜೀತ ಎಷ್ಟು ಮಾಡಿದರೇನು
ಬಲ್ಪಂಥವಿಲ್ಲದವನ ಬಾಳ್ವೆಯೇನು
ಕಲ್ಪಕಲ್ಪಿತ ಕಾಗಿನೆಲೆಯಾದಿಕೇಶವನ
ಸ್ವಲ್ಪವೂ ನೆನೆಯದ ನರನಿದ್ದರೇನು

**ರಾಗ: ಖರಹರಪ್ರಿಯ** ಸ ರಿ ಗ ಮ ಪ ದ ನಿ ಸ **ಅನ್ಯ ಸ್ವರ: ಗ** **ಆದಿತಾಳ**

। ,,,ರೀಮ ಪಾಪಪಾನಿಮಪಾ । ,,,ಮನಿಪ ಮಮ । ಗಮಗಾರೀ ॥
**ಆರು ಬಾಳಿದ ರೇನು ಆ ರು ಬ ದು ಕಿದ ರೇನು**

। ರಿಮರಿರಿನೀನೀ । ನಿನೀ ದ ನೀದಪ । ಪಪಾದಮಾಪಾ । ದಾದಾಸಾ,, ॥
**ನಾ ರಾಯ ಣನ ಸ್ಮರ ಣೆ ನಮಗಿ ಲ್ಲ ದ ನ ಕ**

। ,,,ನಿದಪ ಮಪದದಾಸಾ,ಸಾ । ,,,ದಗರಿಸ ರಿ । ನೀ,ದಸಾ,ಸಾ ॥
**ಉ ಣ್ಣ ಬ ರದವ ರ ಲ್ಲಿ ಊರೂಟ ವಾದರೇ ನು**

। ,,,ದಾನಿ ರೀರೀರಿಸ ಗರಿರೀ । ಸರಿಸನಿದಾನೀ । ರಿಗಮಗರೀ,, ॥
**ಹಣ್ಣು ಬಿ ಡ ದ ಮ ರ ಹಾ ಳಾ ದ ರೇ ನು**

। ,,,ದಗರಿಸಾ ದಸಾನಿದಾದಾ । ,,ಪದಾಗಾ,ಮ । ದಸಾನಿದಾದಾ ॥(ಪಾದದಗಾ ಮ । ದಸಾನೀ,ದಾ ।)
**ಕ ಣ್ಣಿ ಲ್ಲದವ ಗಿ ನ್ನು ಕ ನ್ನ ಡಿ ಯೇಕಿ ನ್ನು (ಕ ನ್ನಡಿಯಿದ್ದು ಫಲ ವೇನು)**

। ,,,ನೀ ನಿ ನೀನಿದಸನಿನಿದದಪ । ,,ರಿಮಾನಿ ಪಾ । ಮ ಗಾಮಗರಿಗಸ ।
**ಪುಣ್ಯವಿ ಲ್ಲ ದ ವ ನ ಪ್ರೌ ಢಿಮೆ ಮೆರೆ ದ ರೇನು**

। ,,,**ಗಾಗಗಾಗಾ**ಮಾ**ಗಾ**ಮಾ । ,,**ಗ** ಮಾನೀಪ । ಗರಿಗಾಸಾ ಸಾ ।
**ಅ ಕ್ಕರಿ ಲ್ಲ ದ ವ ಗೆ ಮಕ್ಕ ಳಿ ದ್ದು ಫ ಲ ವೇನು**

। ,,,ರೀ ಮ ಪಾದಾದಾ ದಾ,, । ,,,ದಾ ನಿದನಿ । ಪಮಾದಾ,ಪಾ ।(। ,,,ದಾನಿದನಿ । ಪಮಾದಾ,ಪಾ ॥)
**ಹೊಕ್ಕು ನ ಡೆ ಯದ ನಂಟತನ ವಿದ್ದ ರೇ ನು ನಂಟತನ ದೊ ಳೇನು**

। ,,,ದಾ ನಿ ರೀರೀರಿಸಗಾರೀ । ,,,ದಗರಿ ಸರಿ । ನೀದಸಾ,ಸಾ ॥
**ರೊಕ್ಕವಿ ಲ್ಲ ದ ವ ಗೆ ಬಂಧುಗಳು ಇದ್ದರೇ ನು**

। ,,,ದಾಸ ಸಸ ದಸನಿನಿ ದಪಾ । ,,,ಪನಿ ದಪಮ । ಮಗಮಗರಿಗಸಾ ॥
**ಮರ್ಕಟನ ಕೈ ಯೊಳಗೆ ಮಾಣಿ ಕ್ಯ ವಿ ದ್ದರೇ ನು**

**ಮೊದಲನೆಯ ಚರಣದಂತೆ ಮುಂದಿನ ಚರಣ**

**ಅಲ್ಪ ದೊರೆಗಳ ಜೀತ ಎಷ್ಟು ಮಾಡಿದರೇನು**
**ಬಲ್ಪಂಥವಿಲ್ಲದವನ ಬಾಳ್ವೆಯೇನು**
**ಕಲ್ಪಕಲ್ಪಿತ ಕಾಗಿನೆಲೆಯಾದಿಕೇಶವನ**
**ಸ್ವಲ್ಪವೂ ನೆನೆಯದ ನರನಿದ್ದರೇನು**

## ಆರೂ ಸಂಗಡ ಬಾಹೋರಿಲ್ಲ

ಆರೂ ಸಂಗಡ ಬಾಹೋರಿಲ್ಲ
ನಾರಾಯಣನ ನಾಮ ನೆರೆ ಬಾಹೋದಲ್ಲದೆ

ಹೊತ್ತು ನವಮಾಸ ಪರಿಯಂತ ಗರ್ಭದಲ್ಲಿ
ಅತ್ಯಂತ ನೋವು ಬೇನೆಗಳಿಂದಲೆ
ತುತ್ತು ವಸ್ತ್ರವನಿಕ್ಕಿ ಸಲಹಿದಾ ತಾಯ್ತಂದೆ
ಹೊತ್ತುಗಳೆವರಲ್ಲದೆ ಬೆನ್ ಹತ್ತಿ ಬರುವರೆ

ಮನೆ ಮಕ್ಕಳು ತಮ್ಮ ಧನಕೆ ಬಡಿದಾಡುವರು
ಧನಕಾಗಿ ನಿನ್ನನೆ ನಂಬಿದವರು
ಅನುಮಾನವೇಕೆ ಜೀವನು ತೊಲಗಿದಾಕ್ಷಣ
ಇನ್ನೊಂದು ಅರಗಳಿಗೆ ನಿಲ್ಲಗೊಡರು

ಸುತ್ತಲೆ ಕುಳ್ಳಿರ್ದ ಮಿತ್ರ ಬಾಂಧವರೆಲ್ಲ
ಹೊತ್ತು ಹೋದೀತು ಹೊರಗೆ ಹಾಕೆನುವರೊ
ಹಿತ್ತಲಾ ಕಸಕಿಂತ ಅತ್ತತ್ತ ಈ ದೇಹ
ಹೊತ್ತುಕೊಂಡೊಯ್ದು ಅಗ್ನಿಯೊಳು ಬಿಸಿಡುವರೊ

ಹರಣ ಹಿಂಗದ ಮುನ್ನ ಹರಿಯ ಸೇವೆಯ ಮಾಡಿ
ಪರಗತಿಗೆ ಸಾಧನ ಮಾಡಿಕೊಳ್ಳೊ
ಕರುಣನಿಧಿ ಕಾಗಿನೆಲೆಯಾದಿಕೇಶವನ
ನಿರುತದಲಿ ನೆನೆನೆನೆದು ಸುಖಿಯಾಗೊ ಮರುಳ

**ರಾಗ: ಶಿವರಂಜನಿ** ಸ ರಿ ಗ ಪ ದ ಸ + ಮ **ಮಿಶ್ರ ಛಾಪು**

। ಸಾರಿಗಪ ಪಾ । ಗರೀ ರೀಗಾ । ಸರೀಸಾ,, । ,,, ,,,, ।
**ಆ ರೂ ಸಂ ಗಡ ಬಾಹೋ ರಿ ಲ್ಲ**
। ,,ಪಾದಸಸಾ । ಸಸಾ ಸಾ,ಸ । ,ಗರಿ ಸಾ,ಸ । ದಾಸದಪಪಾ ।
**ನಾರಾ ಯ ಣನ ನಾಮ ನೆರೆ ಬಾಹೋ ದ ಲ್ಲ ದೆ**

। ,,ಪ ಪಾ ಪಪ । ದಾಸದಪ ಪಪ । ದಸಾಸಾ ಸಾ । ಸಾ,ಸಾಸಾ ।
**ಹೊತ್ತು ನವ ಮಾ ಸ ಪರಿ ಯಂತ ಗ ರ್ಭದಲ್ಲಿ**
। ,,ರಿರೀ ರೀ । ರೀ, ಗಾರಿರಿಸಾದಾ । ದಸಾರೀಗರಿ । ರೀ,ನೀದಪ ।
**ಅತ್ಯಂತ ನೋವು ಬೇ ನೆಗ ಳಿಂದ ಲೆ**
। ,ಪ ಪಾ ದಸ । ರಿ ಗಾಗಾರೀ । ,ರಿರಿಗಾಸಾ । ಸರೀಗರಿಸಾ ಸಾ ।
**ತುತ್ತು ವ ಸ್ತ್ರವ ನಿ ಕ್ಕಿ ಸಲಹಿದಾ ತಾ ಯ್ತುಂದೆ**
। ,,ದಾ ರಿಸ ಸಸ । ಸದಾದಪಪಾ । ದಸದ ದಪಪಾ । ಪಗ ರಿಗಪಮಾಪಮ । ಗಮಗಾ,,, । ,,, ,,,, ।
**ಹೊತ್ತು ಕಳೆ ವರ ಲ್ಲ ದೆ ಬೆ ನ್ ಹ ತ್ತಿ ಬರುವರೆ**

**ಮೇಲಿನ ಚರಣದಂತೆ**

**ಮನೆ ಮಕ್ಕಳು ತಮ್ಮ ಧನಕೆ ಬಡಿದಾಡುವರು**
**ಧನಕಾಗಿ ನಿನ್ನನೆ ನಂಬಿದವರು**
**ಅನುಮಾನವೇಕೆ ಜೀವನು ತೊಲಗಿದಾಕ್ಷಣ**
**ಇನ್ನೊಂದು ಅರಗಳಿಗೆ ನಿಲ್ಲಗೊಡರು**

**ಸುತ್ತಲೆ ಕುಳ್ಳಿರ್ದ ಮಿತ್ರ ಬಾಂಧವರೆಲ್ಲ**
**ಹೊತ್ತು ಹೋದೀತು ಹೊರಗೆ ಹಾಕೆನುವರೊ**
**ಹಿತ್ತಲಾ ಕಸಕಿಂತ ಅತ್ತತ್ತ ಈ ದೇಹ**
**ಹೊತ್ತುಕೊಂಡೊಯ್ದು ಅಗ್ನಿಯೊಳು ಬಿಸಿಡುವರೊ**

। ದಪಾಗಾ ಸರಿ । ಗಪಾಪಾ ಪಾ । ಪಪಾದಸ ಸಾ । ಸಸಾ ಸಾ, ಸ ।
**ಹ ರ ಣ ಹಿಂ ಗದ ಮುನ್ನ ಹರಿ ಯ ಸೇ ವೆಯ ಮಾಡಿ**
**ಪರಗತಿಗೆ ಸಾಧನ ಮಾಡಿಕೊಳ್ಳೊ**
**ಕರುಣನಿಧಿ ಕಾಗಿನೆಲೆಯಾದಿಕೇಶವನ**
**ನಿರುತದಲಿ ನೆನೆನೆನೆದು ಸುಖಿಯಾಗೊ ಮರುಳ**

## ಆವ ಸಿರಿಯಲಿ ನೀನು

ಆವ ಸಿರಿಯಲಿ ನೀನು ಎನ್ನ ಮರೆತೆ
ದೇವ ಜಾನಕಿರಮಣ ಪೇಳು ರಘುಪತಿಯೆ
ಸುರರ ಸೆರೆಯನು ಬಿಡಿಸಿ ಬಂದೆನೆಂಬಾ ಸಿರಿಯೆ
ಕರಿ ಮೊರೆಯ ಲಾಲಿಸಿದೆನೆಂಬ ಸಿರಿಯೆ

ಶರಧಿಗೆ ಸೇತುವೆ ಕಟ್ಟಿದೆನೆನ್ನುವ ಸಿರಿಯೆ
ಸ್ಥಿರವಾಗಿ ಹೇಳೆನಗೆ ಹೇಳು ರಘುಪತಿಯೆ
ಕಡಲೊಳಗೆ ಮನೆ ಮಾಡಿ ಮಲಗಿದೆನೆಂಬಾ ಸಿರಿಯೆ
ಮೃಢ ನಿನ್ನ ಸಖನಾದನೆಂಬ ಸಿರಿಯೆ

ಬಿಡದೆ ದ್ರೌಪದಿ ಮಾನ ಕಾಯ್ದೆನೆಂಬಾ ಸಿರಿಯೆ
ದೃಢವಾಗಿ ಹೇಳೆನಗೆ ದೇವಕೀ ಸುತನೆ
ಭೂಮಿಯನು ಮಾರಡಿಯ ಮಾಡಿದೆನೆಂಬ ಸಿರಿಯೆ
ಕಾಮ ನಿನ್ನ ಸುತನಾದ ಎಂಬ ಸಿರಿಯೆ

ಬಿನುಗು ದೈವಗಳು ನಿನಗೆಣೆಯಿಲ್ಲವೆಂಬ ಸಿರಿಯೆ
ಅನುಮಾನ ಮಾಡದೆ ಪೇಳೊ ನರಹರಿಯೆ
ಇಂತು ಸಿರಿಯಲಿ ನೀನು ಎನ್ನ ಮರೆತರೆ ಸ್ವಾಮಿ
ಪಂಥವೇ ನಿನಗಿದು ಆವ ನಡತೆ
ಕಂತುಪಿತ ಕಾಗಿನೆಲೆಯಾದಿ ಕೇಶವ ರಂಗ
ಚಿಂತೆಯನು ಬಿಡಿಸಿ ಸಂತೋಷವನು ಪಡಿಸೊ

**ರಾಗ: ಚಕ್ರವಾಕ** ಸ ರಿ¹ ಗ³ ಮ¹ ಪ ದ² ನಿ² ಸ **ಅನ್ಯ ಸ್ವರಗಳು: ರಿ² ಗ²** **ಖಂಡ ಛಾಪು**

ದ । ಪದನೀದಾ ಮಾಮಾ । ಮಾಮಾ ರಿಸರಿಸನೀ । ,,,ದಾನಿ ಸಾಮಾ । ಗಾ;;; ।
**ಅ ದಾ ವ ಸಿ ರಿ ಯ ಲಿ ನೀ ನು ಎ ನ್ನ ಮರೆ ತೆ**

। ,,,ಮಾಮ ಮಾ,, । ಮಾಮಾಪಮಮಾಮಾ । ,,ಮದಾದ ಮದದಾ । ಮದದಾಮದದಾನಿದಮದ ॥
**ದೇ ವ ಜಾ ನ ಕಿ ರ ಮ ಣ ಪೇ ಳು ರ ಘು ಪ ತಿ ಯೆ**

। ನೀ ದನೀನಿ ನೀನೀ । ನೀ ನೀ ನೀನೀಸನಿದಾ । ,,,ದಾ ನಿ ರೀ,, । ರಿಸಸಸ ಸಾಸಾಸದ ।
**ಸುರ ರ ಸೆ ರೆ ಯನು ಬಿಡಿ ಸಿ ಬಂದೆನೆಂ ಬಾ ಸಿ ರಿ ಯೆ**

। ,,ನಿಸಾ ನಿದ ಪಪಮ । ಮಾ,,ಮಗಪಮಗರಿ । ,,,ದಾ ನಿ ಸಾಮಾ । ಗಾ,, ,, ,, ,ದ ॥
**ಕ ರಿ ಮೊರೆಯ ಲಾ ಲಿ ಸಿ ದೆ ನೆಂಬ ಸಿ ರಿ ಯೆ ಅ**

। ,,ಗಗಾಗ ಮಗರಿಗ । ಮಾಮಾ ಮಾ,ಮಮಾ । ,,ಗಮಾಮ ಗಾಮಾ । ಗಾ,,ಗಮಗಮಸಾ ॥
**ಶರ ದಿ ಸೇ ತು ವೆ ಕ ಟ್ಟಿದೆ ಎನು ವ ಸಿ ರಿ ಯೆ**

। ,,ಗ ಮದಾ,,ದಾ । ನೀದದಪದಸನಿನೀನೀ । ನೀ,,ನೀ, ನಿ**ರೀ** । ನೀ**ರೀರೀ,ರಿಗಾ** ॥
**ಸ್ಥಿರ ವಾ ಗಿ ಹೇ ಳೆ ನ ಗೆ ಹೇ ಳು ರಘು ಪ ತಿ ಯೆ**

। ,,**ಗಗಾಗ ಗಾಗಾ** । ಸಾಸಾ **ಗಗ**ಸನಿಪಾ । ,,ಪ ಪಾಪಪಾಪಾ । **ಗಾಗಾ ಗಾಗ**ಮಗಸ ।
**ಕ ಡ ಲೊಳ ಗೆ ಮನೆ ಮಾ ಡಿ ಮಲ ಗಿದೆ ನೊ ಎಂಬ ಸಿ ರಿಯೆ**

। ,,**ರಿ** ಸಾ **ದಾ**,ನೀ । **ರೀರೀರೀ,,ರೀ** । ,,**ರಿಗಾ**ಮ ಸಾಸಾ । ಸಾಗಾಗಾಸಾ,, ॥
**ಮೃಥ ನಿ ನ್ನ ಸ ಖನಾ ದ ನೆಂ ಬ ಸಿ ರಿ ಯೆ**

**ಮೇಲಿನ ನಾಲ್ಕು ಸಾಲಿನಂತೆ** **ಬಿಡದೆ ದ್ರೌಪದಿ ಮಾನ ಕಾಯ್ದೆನೆಂಬಾ ಸಿರಿಯೆ**
**ದೃಢವಾಗಿ ಹೇಳೆನಗೆ ದೇವಕೀ ಸುತನೆ**
**ಭೂಮಿಯನು ಮೂರಡಿಯ ಮಾಡಿದೆನೆಂಬ ಸಿರಿಯೆ**
**ಕಾಮ ನಿನ್ನ ಸುತನಾದ ಎಂಬ ಸಿರಿಯೆ**

**ಮೊದಲೆರಡು ಸಾಲಿನಂತೆ**
**ಬಿನುಗು ದೈವಗಳು ನಿನಗೆಣೆಯಿಲ್ಲವೆಂಬ ಸಿರಿಯೆ**
**ಅನುಮಾನ ಮಾಡದೆ ಪೇಳೊ ನರಹರಿಯೆ**
**ಇಂತು ಸಿರಿಯಲಿ ನೀನು ಎನ್ನ ಮರೆತರೆ ಸ್ವಾಮಿ**
**ಪಂಥವೇ ನಿನಗಿದು ಆವ ನಡತೆ**

**ಕೊನೆಯ ಎರಡು ಸಾಲಿನಂತೆ**
**ಕಂತುಪಿತ ಕಾಗಿನೆಲೆಯಾದಿ ಕೇಶವ ರಂಗ**
**ಚಿಂತೆಯನು ಬಿಡಿಸಿ ಸಂತೋಷವನು ಪಡಿಸೊ**

# ಇಂದು ಸೈರಿಸಿರಿ ಶ್ರೀಕೃಷ್ಣನ ತಪ್ಪು

ಇಂದು ಸೈರಿಸಿರಿ ಶ್ರೀಕೃಷ್ಣನ ತಪ್ಪು
ಮುಂದಕೆ ನಿಮ್ಮ ಮನೆಗೆ ಬಾರನಮ್ಮ

ಮಗುವು ಬಲ್ಲುದೆ ಇಷ್ಟು ಬೆಣ್ಣೆಯ ಕದ್ದರೆ
ಬಿಗಿಯಬಹುದೆ ಶ್ರೀಚರಣವನು
ಅಗಣಿತ ಮಹಿಮನ ಅಂಜಿಸಲೇಕಮ್ಮ
ಬಗೆಯ ಬಾರದೆ ನಿಮ್ಮ ಮಕ್ಕಳಂತೆ

ಹಸುಮಗುವನು ಕಂಡು ಮುದ್ದಿಸಲೊಲ್ಲದೆ
ಹುಸಿಗ ಕಳ್ಳನೆಂದು ಕಟ್ಟುವಿರಿ
ವಸುಧೆಯೊಳಗೆ ನಾನೊಬ್ಬಳೆ ಪಡೆದೆನೆ ನಿಮ್ಮ
ಹಸುಮಗುವಿನಂತೆ ಭಾವಿಸಬಾರದೆ

ಎಷ್ಟು ಸಾರಿಯು ನಾ ಬೇಡವೆಂದರೆ ಕೇಳ
ದುಷ್ಟ ಮಕ್ಕಳ ಕೂಡೆ ಒಡನಾಟವ
ಕಟ್ಟಿದ ನೆಲುವಿನ ಬೆಣ್ಣೆಯನೀವೆನು
ಬಿಟ್ಟು ಕಳುಹಿರಮ್ಮ ಆದಿಕೇಶವನ

ರಾಗ: ದೇಶಾಕ್ಷಿ    ಸ ರಿ೨ ಗ೩ ಪ ದ೨ ಸ  ಸ ನಿ೨ ದ೨ ಪ ಮ೧ ಗ೩ ರಿ೨ ಸ    ಆದಿತಾಳ

। ,,,ಪನಿದ  ಪಾ,,ಪಾಪದಮಗ । ,,ಮಗಾಪದಾ । ಸ ದಾ ಸಾ,,ಸಾ ।
**ಇಂದು ಸೈ ರಿ ಸಿ  ರಿ    ಶ್ರೀ ಕೃ    ಷ್ಣನ  ತ  ಪ್ಪು**
। ,,,ದರಿ  ಸರೀ ದಾಸನಿ  ದ ದಾಪಾ । ,,ಪದಮಾಗಾ । ಪಾಸದದಸಾ,, ॥ ದಾ
**ಮುಂದಕೆ  ನಿ ಮ್ಮ ಮನೆ ಗೆ    ಬಾ    ರ    ನ    ಮ್ಮ**

। ,,,ನಿ  ದ ನಿ  ದಾದಾ ದಾ ದಾದಾ । ,,,ಪದಾಸಾ । ನಿದಸನಿನಿದಪಾ ।
**ಮಗುವು  ಬ ಲ್ಲದೆ  ಇ ಷ್ಟು    ಬೆಣ್ಣೆಯ   ಕ    ದ್ದ ರೆ**
। ,,ನಿದಾಪಾಪಾಪಾ ಪದ ಮಗರಿಗ । ,,ಮಗಾಪದಾ । ದಸಾ,  ,,,, ।
**ಬಿಗಿ ಯಬಹುದೆ   ಶ್ರೀ       ಚ ರ ಣವ    ನು**
। ,,ಪದಾಸಾರಿ  ಗಾಗಾಗಾಗಾಮಗ । ರೀ,  ರಿಮಗ ರೀ । ಸಾರಿನೀ,ದಾ ।
**ಅಗ  ಣಿತ  ಮಹಿಮನ           ಅಂ ಜಿ ಸ    ಲೇ ಕ ಮ್ಮ**
। ,,,ದಗರಿ   ಸಾ ಸಾಸರಿ ನೀದಾ । ,,,ಪದಾಗಾ । ಪಾ,ದದಸಾ, ॥ ಪ
**ಬಗೆಯ ಬಾರ ದೆ  ನಿ ಮ್ಮ    ಮ  ಕ್ಕ    ಳಂ  ತೆ**

**ಮೇಲಿನ ಚರಣದಂತೆ**

**ಹಸುಮಗುವನು ಕಂಡು ಮುದ್ದಿಸಲೊಲ್ಲದೆ**
**ಹುಸಿಗ ಕಳ್ಳನೆಂದು ಕಟ್ಟುವಿರಿ**
**ವಸುಧೆಯೊಳಗೆ ನಾನೊಬ್ಬಳೆ ಪಡೆದೆನೆ ನಿಮ್ಮ**
**ಹಸುಮಗುವಿನಂತೆ ಭಾವಿಸಬಾರದೆ**

**ಎಷ್ಟು ಸಾರಿಯು ನಾ ಬೇಡವೆಂದರೆ ಕೇಳ**
**ದುಷ್ಟ ಮಕ್ಕಳ ಕೂಡೆ ಒಡನಾಟವ**
**ಕಟ್ಟಿದ ನೆಲುವಿನ ಬೆಣ್ಣೆಯನೀವೆನು**
**ಬಿಟ್ಟು ಕಳುಹಿರಮ್ಮ ಆದಿಕೇಶವನ**

# ಇಷ್ಟು ದಿನ ಈ ವೈಕುಂಠ

ಇಷ್ಟು ದಿನ ಈ ವೈಕುಂಠ
ಎಷ್ಟು ದೂರವೊ ಎನ್ನುತಲಿದ್ದೆ
ದೃಷ್ಟಿಯಿಂದಲಿ ನಾನು ಕಂಡೆ
ಸೃಷ್ಟಿಗೀಶನೆ ಶ್ರೀರಂಗಶಾಯಿ

ಎಂಟು ಏಳನು ಕಳೆದುದರಿಂದೆ
ಭಂಟರೈವರು ತುಳಿದುದರಿಂದೆ
ತುಂಟಕನೊಬ್ಬನ ಕರಿದುದರಿಂದೆ
ಭಂಟನಾಗಿ ಬಂದೆನೊ ರಂಗಶಾಯಿ

ವಜ್ರ ವೈಢೂರ್ಯದ ತೊಲೆಗಳ ಕಂಡೆ
ಪ್ರಜ್ವಲಿಪ ಮಹಾ ದ್ವಾರವ ಕಂಡೆ
ನಿರ್ಜರಾದಿ ಮುನಿಗಳ ನಾ ಕಂಡೆ
ದುರ್ಜನಾಂತಕನೆ ಶ್ರೀರಂಗಶಾಯಿ

ರಂಭೆ ಊರ್ವಶಿ ಮೇಳವ ಕಂಡೆ
ತುಂಬುರು ಮುನಿ ನಾರದರನು ಕಂಡೆ
ಅಂಬುಜೋದ್ಭವ ರುದ್ರ ಕಂಡೆ
ಶಂಬರಾರಿ ಪಿತನೆ ರಂಗಶಾಯಿ

ನಾಗಶಯನನ ಮೂರುತಿ ಕಂಡೆ
ಭೋಗಿಭೂಷಣ ಶಿವನನು ಕಂಡೆ
ಭಾಗವತರ ಸಮ್ಮೇಳವ ಕಂಡೆ
ಕಾಗಿನೆಲೆಯಾದಿ ಕೇಶವನ ನಾ ಕಂಡೆ

ರಾಗ: ಉದಯರವಿಚಂದ್ರಿಕಾ ಸ ಗ೨ ಮ೧ ಪ ನಿ೨ ಸ ಆದಿತಾಳ

। ,ಸಾಸ ಸಸ ಸಾ ,ಸಾಗಸನಿನಿಪ । ,ಸಾಸ ನಿಪಪಮ । ಗಾಮ ಪಮಗಗಮ ॥
ಇಷ್ಟು ದಿನ ಈ ವೈ ಕುಂಠ ಎಷ್ಟು ದೂರವೊ ಎನ್ನುತಲಿ ದ್ದೆ
। ಸ ಸಾಮಗಸ ಸನಿ ,ನೀಸ ನಿಪಪಮ । ,ಗಾಮಗಮಗಾಸನಿ । ಸಾ,ನೀ,ಪಾಗಾ,ಮಪನಿ ॥
ದೃಷ್ಟಿಯಿಂದಲಿ ನಾನು ಕಂಡೆ ಸೃಷ್ಟಿಗೀ ಶನೆ ಶ್ರೀರಂಗಶಾ ಯಿ

। ,ಪಾಮ ಗಸನಿನಿ ,ಸಗಾಮಪಾಗಮಗಾ । ,ನೀ ಪಮಗಗಾಸನಿನೀ । ಸಗಮಪಗಮಗಾ ॥
ಎಂಟು ಏಳನು ಕಳೆದುದರಿಂದೆ ಭಂಟರೈ ವರು ತುಳಿದುದರಿಂದೆ
। ,ಸಗಾಗಗಾಗಾ ಗಗ ,ಮಗಾಮಗಾಸಾ ನೀ । ,ಸಾ,ಸನೀಪ ಮ ಪ । ಸಾ, ನೀ,ಪಾಗಾ,ಮಪನಿನೀ ॥
ತುಂಟಕನೊಬ್ಬನ ಕರಿದುದರಿಂದೆ ಭಂಟನಾಗಿ ಬಂದೆ ನೊ ರಂಗಶಾ ಯಿ

। ,ಸಪಾಪ ಮಗಸ ಸ ನಿ ,ಸ ಗಾಮಪಾ ಗಮಗಾ । ,ಪಾ,ಪಮಾಗ ಸ ಸನಿ । ಸಗಮಪ ಗಮಗಾ ॥
ವ ಜ್ರ ವೈಢೂರ್ಯದ ತೊಲೆಗಳ ಕಂಡೆ ಪ್ರಜ್ವಲಿಪ ಮಹಾ ದ್ವಾರವ ಕಂಡೆ
। ,ಗಾ,ಗ ಗಾಗಗ ಗಮಗ ಮಗ ಸಸನೀ । ,ಸಗಾಗ ಸಾ ನಿಪನಿ । ಸಾ,ನೀ,ಪಾಗಾ,ಮಪನಿ ॥
ನಿರ್ಜರಾದಿ ಮುನಿಗಳನಾ ಕಂಡೆ ದುರ್ಜನಾಂತಕನೆ ಶ್ರೀರಂಗಶಾ ಯಿ

ಮೇಲಿನ ಚರಣಗಳಂತೆ

ರಂಭೆ ಊರ್ವಶಿ ಮೇಳವ ಕಂಡೆ ತುಂಬುರು ಮುನಿ ನಾರದರನು ಕಂಡೆ
ಅಂಬುಜೋದ್ಭವ ರುದ್ರ ಕಂಡೆ ಶಂಬರಾರಿ ಪಿತನೆ ರಂಗಶಾಯಿ

ನಾಗಶಯನನ ಮೂರುತಿ ಕಂಡೆ ಭೋಗಿಭೂಷಣ ಶಿವನನು ಕಂಡೆ
ಭಾಗವತರ ಸಮ್ಮೇಳವ ಕಂಡೆ ಕಾಗಿನೆಲೆಯಾದಿ ಕೇಶವನ ನಾ ಕಂಡೆ

## ಈತನೀಗ ವಾಸು ದೇವನು

ಈತನೀಗ ವಾಸು ದೇವನು ಲೋಕದೊಡೆಯ

ಈತನೀಗ ವಾಸುದೇವ ಈ ಸಮಸ್ತ ಲೋಕದೊಡೆಯ
ದಾತಗೊಲಿದು ತೇರನೇರಿ ತೇಜಿ ಪಿಡಿದು ನಡೆಸಿದಾತ

ದನುಜೆಯಾಳ್ದಣ್ಣನಯ್ಯನ ಪಿತನ ಮುಂದೆ ಕೌರವೇಂದ್ರನ
ಅನುಜೆಯಾಳಿದವನ ಶಿರವ ಕತ್ತರಿಸುತ
ಅನುಜೆಯಾಳಿದವನ ಬೆಂಕಿ ಮುಟ್ಟದಂತೆ ಕಾಯ್ದ ರುಕ್ಮನ
ಅನುಜೆಯಾಳಿದವನ ಮೂರ್ತಿಯನ್ನು ನೋಡಿರೊ

ಕ್ರೂರನಾದ ಫಣಿಪ ಬಾಣ ತರಣಿಜನು ನಿರೀಕ್ಷಿಸಿ ಆಗ
ವೀರನೆಜ್ಜೆ ಎಸುಗೆ ಒಪ್ಪುದನ್ನು ಈಕ್ಷಿಸಿ
ಧಾರಿಣಿಯ ಪದದಳೌಕಿ ಚರಣ ಭಜಕ ನರನ ಕಾಯ್ದ
ಪಾರಕರ್ತನಾದ ದೇವ ಈತನೋಡಿರೊ

ವ್ಯೊಮಕೇಶನಿಪ್ಪದೆಸೆಯ ಆ ಮಹಾ ಮಹಿಮೆಯುಳ್ಳ
ಸಾಮಜವನು ಏರಿ ಬರುವ ತಕ್ಷಿಯನೀಕ್ಷಿಸಿ
ಪ್ರೇಮದಿಂದ ಉರವನೊಡ್ಡಿ ಡಿಂಗರಿಗನ ಕಾಯ್ದ–ಸಾರ್ವ
ಭೌಮ ಬಡದಾದಿ ಕೇಶವನ್ನ ನೋಡಿರೊ

ರಾಗ: ಕಲ್ಯಾಣಿ ಸ ರಿ ಗಿ ಮಿ ಪ ದಿ ನಿ ಸ ತ್ರಿಶ್ರನಡೆ ಏಕತಾಳ

। ,,,ಮಾದ । ನಿರಿಸನಿದಾ । ಮಪಸನಿದಪ । ಪಮಗಾಮಾ । ಪಾ,,,,, । ಮಪನಿದನಿದ । ಪಾಮದಪಮಗಾ ।
**ಈ ತ ನೀ ಗ ವಾ ಸು ದೇ ವ ನು ಲೋ ಕ ದೊ ಡೆ ಯ**

। ,,ಮಗಾಗ । ಮಾದಾಮಾ । ದನಿಸಾನೀ । ಸಾ,,ಸಾ । ,,ನಿಸಾ ನಿ । ಸಾ,,ಸಾ । ಸನಿರಿಸಸನಿ । ದ ನೀದನಿದ ।
**ಈ ತ ನೀ ಗ ವಾ ಸು ದೇ ವ ಈ ಸ ಮ ಸ್ತ ಲೋ ಕ ದೊಡೆಯ**

। ಪಾದಾ,ನಿ । ಸಾ ಗಾರೀ । ಸಾನಿರಿಸಾನೀ । ದನಿನೀಸನಿದಾ । ದನಿರಿಸನಿದ । ದನಿದನಿದಾ । ಮಪನಿದನಿದ । ಮಪಮಗಮಗ ।
**ದಾ ತ ಗೊಲಿ ದು ತೇ ರ ನೇ ರಿ ತೇ ಜಿ ಪಿ ಡಿ ದು ನ ಡೆ ಸಿ ದಾ ತ**

। ,,ರಿ ಗಾರಿ । ಗಾ,,ಗಾ । ರಿಗರೀಗರಿಸನಿ । ರಿಗಾಗ ಗಾ । ,,ಗರೀಗ । ಗಮಪಾಪಾ । ಮಪನಿದನಿದ । ಪಾಮದಪಾಮಗಾ ।
**ದನುಜೆ ಯಾಳ್ದ ಣ ಣ್ಣ ನ ಯ್ಯನ ಪಿತನ ಮುಂ ದೆ ಕೌ ರ ವೇಂ ದ್ರನ**

। ,,ಮಗಾಮ । ಮನಿದದದಾ । ನಿದನಿದನಿದ । ನಿದನಿದದಪ । ಪಾನಿ ದಪಮ । ಗಪಮಾದಪಗಪ । ,,, ,,, ।
**ಅ ನುಜೆ ಯಾ ಳಿ ದ ವ ನ ಶಿ ರ ವ ಕ ತ್ತರಿಸು ತ**

। ,,ಗಮಾಗ । ಮಾದಾಮಾ । ದನಿಸಾಸನಿ । ಸಾ,,ಸಾ । ,,ನೀ, ನಿ । ಸಾ,,ಸಾ । ಸಾನಿರಿಸಾನೀ । ದನಿನೀದಾ ।
**ಅನು ಜೆ ಯಾ ಳಿ ದ ವನ ಬೆಂಕಿ ಮುಟ್ಟ ದಂ ತೆ ಕಾ ಯ್ದ ರು ಕ್ಮ ನ**

। ,,ದದಾನಿ । ಸಗರೀಗರಿರೀ । ನಿರಿರೀಗರಿಸಾ । ಸಾನಿರಿಸನಿದಾ । ,,ಗಪಾಪಾ । ,,ಪದಾನಿ । ಸಾನಿರಿಸನಿದನಿ । ನೀಸನಿದಾಪಾ, ।
**ಅನುಜೆ ಯಾ ಳಿ ದ ವ ನ ಮೂ ರ್ತಿ ಯ ನ್ನು ನೋಡಿ ರೊ**

**ಮೇಲಿನಂತೆ ಉಳಿದ ಚರಣಗಳು**

**ಕ್ರೂರನಾದ ಫಣಿಪ ಬಾಣ ತರಣಿಜನು ನಿರೀಕ್ಷಿಸಿ ಆಗ**
**ವೀರನೆಜ್ಜೆ ಎಸುಗೆ ಒಪ್ಪುದನ್ನು ಈಕ್ಷಿಸಿ**
**ಧಾರಿಣಿಯ ಪದದಳೌಕಿ ಚರಣ ಭಜಕ ನರನ ಕಾಯ್ದ**
**ಪಾರಕರ್ತನಾದ ದೇವ ಈತನೋಡಿರೊ**

**ವ್ಯೋಮಕೇಶನಿಪ್ಪದೆಸೆಯ ಆ ಮಹಾ ಮಹಿಮೆಯುಳ್ಳ**
**ಸಾಮಜವನು ಏರಿ ಬರುವ ತಕ್ಷಿಯನೀಕ್ಷಿಸಿ**
**ಪ್ರೇಮದಿಂದ ಉರವನೊಡ್ಡಿ ಡಿಂಗರಿಗನ ಕಾಯ್ದ–ಸಾರ್ವ**
**ಭೌಮ ಬಡದಾದಿ ಕೇಶವನ್ನ ನೋಡಿರೊ**

# ಊರಿಗೆ ಬಂದರೆ ದಾಸಯ್ಯ

ಊರಿಗೆ ಬಂದರೆ ದಾಸಯ್ಯ–ನಮ್ಮ
ಕೇರಿಗೆ ಬಾ ಕಂಡ್ಯಾ ದಾಸಯ್ಯ

ಕೋಲು ಕೊಳಲು ಕೈಲಿ ದಾಸಯ್ಯ–ಈ
ಕಲ್ಲಿಗೆ ವರವಿತ್ತೆ ದಾಸಯ್ಯ
ಮಲ್ಲನ ಮರ್ದಿಸಿ ಮಾವನ ಮಡುಹಿದ
ನೀಲಮೇಘ ಶ್ಯಾಮ ದಾಸಯ್ಯ

ಕೊರಳೊಳು ವನಮಾಲೆ ದಾಸಯ್ಯ–ಬಲು
ಗಿರಿಯನು ನೆಗೆಹಿದ ದಾಸಯ್ಯ
ಇರಿಳು ಹಗಲು ನಿನ್ನ ಕಾಣದೆ ಇರಲಾರೆ
ಮರುಳು ಮಾಡುವಂಥ ದಾಸಯ್ಯ

ಆದಿನಾರಾಯಣ ದಾಸಯ್ಯ–ನೀ
ಒಂದು ಸಾಸಿರ ನಾಮದ ದಾಸಯ್ಯ
ನಂದ ಗೋಕುಲದೊಳು ಪುಟ್ಟಿ ಗೋವ್ಗಳ ಕಾಯ್ದ
ಆದಿಕೇಶವರಾಯ ದಾಸಯ್ಯ

ರಾಗ:ಖರಹರಪ್ರಿಯ ಸ ರಿ ಗ ಮ ಪ ದ ನಿ ಸ ತ್ರಿಶ್ರನಡೆ ಏಕತಾಳ

। ಸ ಸಪ ಪ ಪಪ । ಮಮಪಪ ಪಪ । ಮಪಮ ಗ ರಿ ಗ । ಸ ರಿಸಸಾ, ।
**ಊರಿಗೆ ಬಂದರೆ ದಾ ಸಯ್ಯ ನಮ್ಮ ಕೇರಿಗೆ ಬಾ ಕಂಡ್ಯಾ ದಾಸ ಯ್ಯ**

। ನೀ ಸಾ ನಿ ನಿ । ಸಾ ಸಾಸಾ । ರೀಪಮಮಗ । ರೀ,, ಗರಿ । ರಿಪಮಾಗಾ । ರಿಸರೀಗಾ । ರಿಸಸಸಾ, । ಸಾ, ,,, ।
**ಕೋಲು ಕೊಳ ಲು ಕೈಲಿ ದಾ ಸ ಯ್ಯ ಈ ಕ ಲ್ಲಿ ಗೆ ವರವಿತ್ತೆ ದಾ ಸ ಯ್ಯ**

। ಮಾಮಾಪಾ । ಮಪಪಾ ಪಾ । ಪದಾನಿಸಾ । ನಿ ದ ದಪಪಾ । ಪದದಾ ದಪ । ಮಾ ಮಾಮಾ । ಗರೀಗಪಮ । ಮಾ,,,, ।
**ಮ ಲ್ಲ ನ ಮ ರ್ದಿಸಿ ಮಾ ವನ ಮಡುಹಿ ದ ನೀ ಲ ಮೇ ಘ ಶ್ಯಾಮ ದಾ ಸ ಯ್ಯ**

। ರಿಪಪಾ ಮಗ । ರೀ ರೀ ಗಾ । ರಿಸಾಸಾ, । ಸಾ,,,, ।
**ನೀ ಲ ಮೇ ಘ ಶ್ಯಾಮ ದಾ ಸ ಯ್ಯ**

। ಸ ನಿನೀ ಸಾ । ಸ ನಿನಿಸ ಸಾ । ರೀಪಮಾಗ । ರೀ,, ರಿ ಸ । ರಿಪಮಾಗಾ । ರಿಸರೀಗಾ । ರಿಸಸಸಾ, । ಸಾ, ,,, ।
**ಕೊರಳೊಳು ವನಮಾಲೆ ದಾ ಸ ಯ್ಯ ಬಲು ಗಿರಿಯ ನು ನೆಗೆಹಿದ ದಾ ಸ ಯ್ಯ**

। ಮಮಮಪ ಪಪ । ಪಾ ಮಪಪಾ । ಪದಾನಿಸಾ । ನಿದಪಾಪಾ । ಪ ದದಾ ದಪ । ಪಮಮಾಗಾ । ಗರೀಗಪಾ । ಮಾ,,,, ।
**ಇ ರುಳು ಹಗ ಲು ನಿ ನ್ನ ಕಾ ಣದೆ ಇರಲಾರೆ ಮರುಳು ಮಾ ಡು ವಂಥ ದಾ ಸ ಯ್ಯ**

। ರಿ ಪ ಪಾ ಮಗ । ಗರಿರೀ ಗಾ । ರಿಸಸಸಾ, । ಸಾ,,,, ।
**ಮರುಳು ಮಾ ಡುವಂಥ ದಾ ಸ ಯ್ಯ**

**ಮೇಲಿನಂತೆ ಮುಂದಿನ ಚರಣ**

**ಆದಿನಾರಾಯಣ ದಾಸಯ್ಯ–ನೀ**
**ಒಂದು ಸಾಸಿರ ನಾಮದ ದಾಸಯ್ಯ**
**ನಂದ ಗೋಕುಲದೊಳು ಪುಟ್ಟಿ ಗೋವ್ಗಳ ಕಾಯ್ದ**
**ಆದಿಕೇಶವರಾಯ ದಾಸಯ್ಯ**

# ಎನ್ನ ಕಂದ ಹಳ್ಳಿಯ ಹನುಮ

ಎನ್ನ ಕಂದ ಹಳ್ಳಿಯ ಹನುಮ
ಚೆನ್ನಾಗ್ಯೆದಾರ ಲಕ್ಷ್ಮಣದೇವರು

ತುಪ್ಪ ಪಂಚಾಮೃತವಂದು ಅಡವಿಗಡ್ಡೇಗಳಿಂದು
ಕರ್ಪೂರ ವೀಳಯವಂದು ಕುರುಕು ಇಂದು
ಸುಪ್ಪತ್ತಿಗೆ ಮಂಚವಂದು ಹುಲ್ಲ್ ಹಾಸಿಗೆ ಇಂದು
ಶ್ರೀಪತಿ ರಾಘವ ಕ್ಷೇಮದಲ್ಯೆದಾರೆ

ನವ ವಸ್ತ್ರಗಳಂದು ನಾರಸೀರೆಗಳಿಂದು
ಹೂವಿನ ಗಂಟು ಅಂದು ಜಡೆಗಳಿಂದು
ಜವ್ವಾಜಿ ಕತ್ತುರಿಯಂದು ಭಸಿತಧೂಳಿಂದು
ಶ್ರೀವರ ರಾಘವ ಕ್ಷೇಮದಲ್ಯೆದಾರೆ

ಕನಕ ರಥಗಳಂದು ಕಾಲುನಡಿಗೆ ಇಂದು
ಘನ ಛತ್ರ ಚಾಮರವಂದು ಬಿಸಿಲು ಇಂದು
ಸನಕಾದಿಗಳೋಲ್ಯೆಪ ಆದಿಕೇಶವ ನಮ್ಮ
ಹನುಮೇಶ ರಾಘವ ಕ್ಷೇಮದಲ್ಯೆದಾರೆ

ರಾಗ: ದ್ವಿಜಾವಂತಿ ಸ ರಿ೨ ಗ೩ ಮ೧ ಪ ನಿ೨ ದ೨ ನಿ೩ ಸ ಸ ನಿ೨ ದ೨ ಪಮ೧ ಗ೩ ಮ೧ ರಿ೨ ಗ೨ ರಿ೨ ಸ ಆದಿತಾಳ

। ಸಾಗಾ ರೀಗಾ । ಸಾಗ ರಿ ಸ ನಿ ಸಾ । ರೀಮಾಮನಿಪಾ । ಮಾಪ ಪಗಾ ರಿ ರಿ ।
ಎನ್ನ ಕಂದ ಹಳ್ಳಿಯ ಹನುಮ ಚೆನ್ನಾಗಿ ಹರೆ ಲ ಕ್ಷ್ಮಣದೇವರು
। ಪಾಸಾಸಾಸಾ । ನಿದನೀದಾಪಾ । ಗಾಮಾನೀಪಾ । ಮಗಮಾರಿಗರೀ ।
ಶ್ರೀ ಪತಿ ರಾ ಘವ ಕ್ಷೇ ಮದ ಲಿ ಹರೆ

। ಪಾನೀ ದಾನೀ । ದಪಮಾಪಾ ನೀ । ಪಾಸಾಸಾರೀ । ನೀದಾನೀಸಾ ।
ತುಪ್ಪ ಪಂಚಾ ಮೃ ತ ವಂದು ಅ ಡ ವಿ ಗ ಡ್ಡೆಗ ಳಿಂದು
। ಪಾಸಾಸಾ ರೀ । ದಾನೀ ದಾ ಪಾ । ಗಾಮಾಮನಿಪಾ । ಮಪನಿಪಗಾರೀ ।
ಕ ರ್ಪೂರ ವೀಳ್ಯ ಅಂದು ಕು ರು ಕು ಇಂ ದು
। ಸಾಗಾರೀಗಾ । ಸಾ ರೀ ಸನಿ ಸಾ । ಗಾಮಾಮನಿ ಪಾ । ಗಾಮಾ ಗಾ ರೀ ।
ಸುಪ್ಪತ್ತಿಗೆ ಮಂಚ ಅಂದು ಹು ಲ್ಲ ಹಾ ಸಿ ಗೆ ಇಂದು
। ಪಾಸಾಸಾರೀ । ದಾನೀದಾಪಾ । ,,ಮನಿ ಪಾ । ಮಾಪಾಗಾರೀ ।
ಶ್ರೀ ವರ ರಾ ಘವ ಕ್ಷೇಮದ ಲಿ ಹರೆ

। ನೀನೀನೀನೀ । ನಿದಪಮ ಪಾ ನೀ । ಪಾಸಾಸಾ ರೀ । ನೀದಾನೀಸಾ ।
ನವ ವಸ್ತ್ರ ಗ ಳು ಅಂದು ನಾ ರ ಸೀ ರೆ ಗ ಳಿಂದು
। ಪಾಸಾಸಾರೀ । ದಾನೀ ದಪಪಾ । ಗಾಮಾಮಾನಿಪ । ಮಪನಿಪಗಾರೀ ।
ಹೂ ವಿ ನ ಗಂಟು ಅಂದು ಜ ಡೆ ಗ ಳಿಂ ದು
। ಸಾಗಾ ರೀ ಗಾ । ಸಾ ರೀ ಸನಿಸಾ । ರೀಮಾನೀಪಾ । ಮಪನಿಪಗಾರೀ ।
ಜವ್ವಾಜಿ ಕ ಸ್ತುರಿ ಅಂದು ಭಸಿ ತ ಧೂ ಳಿಂದು
। ,,ಪನಿನೀಸಾ । ಸನಿರಿಸನಿದಪಾ । ರಿಮಮನಿಪಾ । ಮಪನಿಪಗಾರೀ ।
ಶ್ರೀವರ ರಾ ಘ ವ ಕ್ಷೇ ಮ ದ ಲಿ ಹ ರೆ

। ಪಾನೀದಾ ನೀ । ದಾಪಮಪಾನೀ । ಸಾ,,ಸಾಸಾ । ನೀದಾ ನೀಸಾ ।
ಕ ನ ಕ ರ ಥ ಗ ಳಂದು ಕಾ ಲು ನ ಡಿಗೆ ಇಂದು
। ಪಾಸಾನೀಸಾ । ದಾನೀ ದಾಪಾ । ,,ರಿಮಮನಿಪಾ । ಮಾಪಾಗಾರೀ ।
ಘ ನ ಛ ತ್ರ ಚಾಮರಂದು ಬಿ ಸಿ ಲು ಇಂ ದು
। ಸಾಗಾರೀಗಾ । ಸಾರೀನೀಸಾ । ರೀಮಾನೀಪಾ । ಮಾಪಾ ಗಾರೀ ।
ಸ ನ ಕಾದಿ ಓ ಲೈಪ ಆ ದಿ ಕೇ ಶ ವ ನಮ್ಮ
। ಪಾಸಾಸಾ ರಿಸ । ನಿದನೀದಾಪಾ । ,,ರಿಮಮನಿಪಾ । ಮಾಪಾಗಾರೀ ।
ಹನುಮೇಶ ರಾ ಘ ವ ಕ್ಷೇ ಮ ದ ಲಿ ಹ ರೆ

## ಎಲ್ಲಾರು ಮಾಡುವುದು ಹೊಟ್ಟೆಗಾಗಿ

ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ

ನೆಲ್ಲುಗಳ ಕುಟ್ಟಿಕೊಂಡು ಬಿದುರುಗಳ ಹೊತ್ತುಕೊಂಡು
ಕೂಲಿಗಳ ಮಾಡುವುದು ಹೊಟ್ಟೆಗಾಗಿ
ನಾಲ್ಕು ವೇದ ಪುರಾಣ ಪಂಚಾಂಗ ಹೇಳಿಕೊಂಡು
ಕಾಲಕಳೆಯುವುದೆಲ್ಲ ಹೊಟ್ಟೆಗಾಗಿ

ಹೊಡೆದು ಬಡಿದು ಕಬ್ಬಿಣವ ಕಾಸಿ ತುಪ್ಪಾಕಿ ಮಾಡಿ
ಹೊಳೆವ ಗುಂಡು ಮಾಡುವುದು ಹೊಟ್ಟೆಗಾಗಿ
ಗಂಡ ಭಂಡರೆಲ್ಲಮುಂದೆ ಕತ್ತಿ ಹರಿಗ್ಯೆಯ ಬಿರಿದು
ಖಂಡತುಂಡ ಮಾಡುವುದು ಹೊಟ್ಟೆಗಾಗಿ

ದೊಡ್ಡ ದೊಡ್ಡ ಕುದುರೆ ಏರಿ ಮೇಜೆ ಹುಟ್ಟು ರಾಹುತನಾಗಿ
ಹೊಡೆದಾಡಿ ಸಾಯುವುದು ಹೊಟ್ಟೆಗಾಗಿ
ಕುಂಟೆ ಗುರಿಗೆಯಿಂದ ಹೆಂಟೆಯಿಂದ ಹದಮಾಡಿ
ರಂಟೆ ಹೊಡೆದು ಬೆಳಸುವುದ ಹೊಟ್ಟೆಗಾಗಿ

ಬೆಟ್ಟ ಘನದಿಂದ ಕಳ್ಳತನವನೆ ಮಾಡಿ
ಕಟ್ಟಿ ಹೊಡೆಸಿಕೊಳ್ಳುವುದು ಹೊಟ್ಟೆಗಾಗಿ
ಸನ್ಯಾಸಿ ಜಂಗಮ ಜೋಗಿ ಜಟ್ಟಿ ಮೊಂಡ ಬೈರಾಗಿ
ನಾನ ವೇಷ ಹೊಂದುವುದು ಹೊಟ್ಟೆಗಾಗಿ
ಉನ್ನತ ಕಾಗಿನೆಲೆ ಆದಿಕೇಶವನ
ಅನುದಿನ ನೆನೆವುದು ಮುಕ್ತಿಗಾಗಿ

ರಾಗ: ಶಂಕರಾಭರಣ ಸ ರಿ ಗ ಮ ಪ ದ ನಿ ಸ ತ್ರಿಶ್ರ ನಡೆ ಆದಿತಾಳ

। ಸಾರಿಪ ಮಾ ಗಾ ಮಗ ರೀ ಸಾ ಸ ರಿಸಾನೀ, ಸಾನಿ । ಸಾಸ ಸರೀಗಾ, ಮಾಗ । ರೀಸ ರೀಸ । ಸಾ,,,, ॥
ಎಲ್ಲಾರು ಮಾಡುವುದು ಹೊಟ್ಟೆಗಾ ಗಿ ಗೇಣು ಬಟ್ಟೆಗಾ ಗಿ ಗೇ ಣು ಬಟ್ಟೆಗಾ ಗಿ

। ಸಾಮ ಮಮಾ ಮಾಮಮ ಗ ಮಪ ಪಪಪಾ ಪಾ ಪ ಪಾ ಪ । ದಾದದದಾ ಪಾ ದ ಪ ಮಾ । ಗಾ ಮಪಾ,ಪಾ,,,, ॥
ನೆಲ್ಲುಗಳ ಕುಟ್ಟಿಕೊಂಡು ಬಿದುರುಗಳ ಹೊತ್ತುಕೊಂಡು ಕೂಲಿಗಳ ಮಾಡುವುದು ಹೊಟ್ಟೆಗಾ ಗಿ
। ಸಾ ಸ ಸಾ ಸ ನೀಸಾಸಾ ನೀ ಸನಿದಾ ಪಾದಪ ಮಾ । ದಾದದದಾಪ ದಾಪ ಮಾ । ಗಾ ಮಪಮಾಗಮಗರಿಸಾ ॥
ನಾಲ್ಕು ವೇದ ಪುರಾಣ ಪಂಚಾಂಗ ಹೇಳಿಕೊಂಡು ಕಾಲಕಳೆಯುವುದೆಲ್ಲ ಹೊಟ್ಟೆಗಾ ಗಿ

ಮೇಲಿನಂತೆ

ಹೊಡೆದು ಬಡಿದು ಕಬ್ಬಿಣವ ಕಾಸಿ ತುಪ್ಪಾಕಿ ಮಾಡಿ
ಹೊಳೆವ ಗುಂಡು ಮಾಡುವುದು ಹೊಟ್ಟೆಗಾಗಿ
ಗಂಡ ಭಂಡರೆಲ್ಲಮುಂದೆ ಕತ್ತಿ ಹರಿಗೈಯ ಬಿರಿದು
ಖಂಡತುಂಡ ಮಾಡುವುದು ಹೊಟ್ಟೆಗಾಗಿ

ದೊಡ್ಡ ದೊಡ್ಡ ಕುದುರೆ ಏರಿ ಮೇಜೆ ಹುಟ್ಟು ರಾಹುತನಾಗಿ
ಹೊಡೆದಾಡಿ ಸಾಯುವುದು ಹೊಟ್ಟೆಗಾಗಿ
ಕುಂಟೆ ಗುರಿಗೆಯಿಂದ ಹೆಂಟೆಮಣ್ಣ ಹದಮಾಡಿ
ರಂಟೆ ಹೊಡೆದು ಬೆಳಸುವುದ ಹೊಟ್ಟೆಗಾಗಿ

ಮೊದಲೆರಡು ಆವರ್ತನಗಳು ಒಂದೇ ತೆರನೆ

ಬೆಟ್ಟ ಘನದಿಂದ ಕಳ್ಳತನವನೆ ಮಾಡಿ
ಕಟ್ಟಿ ಹೊಡೆಸಿಕೊಳ್ಳುವುದು ಹೊಟ್ಟೆಗಾಗಿ
ಸನ್ಯಾಸಿ ಜಂಗಮ ಜೋಗಿ ಜಟ್ಟಿ ಮೊಂಡ ಬೈರಾಗಿ
ನಾನ ವೇಷ ಹೊಂದುವುದು ಹೊಟ್ಟೆಗಾಗಿ
ಉನ್ನತ ಕಾಗಿನೆಲೆ ಆದಿಕೇಶವನ
ಅನುದಿನ ನೆನೆವುದು ಮುಕ್ತಿಗಾಗಿ

# ಎಂಥ ಟವಳಿಗಾರನಮ್ಮ

ಎಂಥ ಟವಳಿಗಾರನಮ್ಮ ಗೋಪಮ್ಮ ನಿನ ಮಗ
ಎಂಥ ಟವಳಿಗಾರನಮ್ಮ ಯಶೋದೆ ನಿನ ಮಗ

ಹಣವನ್ನು ಕೊಡುವೆನೆಂದು ಗುಣದಿಂದ ಎನ್ನ ತಂದ
ಹಣವ ಕೇಳಿದರಲ್ಲಿ ಹಣವ ತಲ್ಲಣ ಪ–
ಲ್ಲಣವ ಕುದುರೆಯ ಬೊ–
ಕ್ಕಣವ ಹೋಗೆನ್ನುತಾನೆ

ಬಳೆಯನ್ನು ಕೊಡುವೆನೆಂದು ಬಲುಮಾತಿನಿಂದ ತಂದ
ಬಳೆಯ ಕೇಳಿದರೆಲ್ಲಿ ಬಳೆಯ ಗದ್ದೆಯೊಳಗಿನ
ಕಳೆಯೆ ಊರ ಮುಂದಿನ ಗೆಳೆಯೆ ಕೈಕಾಲ ಹಿಡಿದು
ಸೆಳೆಯೆ ಹೋಗೆನುತಾನೆ

ಕಡುಗವ ಕೊಡುವೆನೆಂದು ಸಡಗರದಿ ಎನ್ನ ತಂದ
ಕಡಗ ಕೇಳಿದರೆಲ್ಲಿ ಕಡಗ ಅಂಬರದಲ್ಲಿನ
ಗುಡುಗ ಎಲೆ ಮ್ಯಾಗಿನ
ಧಡಗ ಹೋಗೆನ್ನುತಾನೆ

ವಾಲೆಯ ಕೊಡುವೆನೆಂದು ವಾಲಗದಿಂದ ತಂದ
ವಾಲೆಯ ಕೇಳಿದರೆಲ್ಲಿ ವಾಲೆ ಕನ್ನಡಿಯ
ಕಪೋಲೆ ಈವಿಗಿಷ್ಟದ್ದು ನಿನ ಕಾಲಿಗೆ ಸಂ–
ಕೋಲೆ ಹೋಗೆನ್ನುತಾನೆ

ಆದಿಕೇಶವನ ಮೇಲೆ ಆಣೆಯಿಟ್ಟು ಕರೆದು ತಂದ
ಆಣೆ ಎಲ್ಲಿಹುದೆಂದ ಬರೆದ
ಆನಂದದಿಂದ ಬೆರೆದ ಬೀದಿಯಲ್ಲಿಂದ ಕರೆದ
ಹೀಂಗೆ ಧರೆಯೊಳು ಮೆರೆದ ನಮ್ಮ ಕೃಷ್ಣರಾಯ

**ರಾಗ: ಕಲ್ಯಾಣಿ** **ಸ ರಿ$^2$ ಗ$^3$ ಮ$^2$ ಪ ದ$^2$ ನಿ$^3$ ಸ** **ಏಕತಾಳ**

। ಗಾ,ಗಾ, ಗಾರೀಗಾರೀಸಾ । ಸಸ, ಪಾ ಪಾಪಾ ಗರಿ ಸ ರಿ ।
**ಎಂಥ ಟ ವ ಳಿ ಗಾರ ನಮ್ಮ ಗೋಪ ಮ್ಮ ನಿನ ಮಗ**
। ಗಾ,ಗಾ, ಗಾರೀಗಾರೀಸಾ । ಸಸ, ಪಾ ಪಾ ಪಾ ಗರಿ ಸ ರಿ ।
**ಎಂಥ ಟ ವ ಳಿ ಗಾರ ನಮ್ಮ ಯಶೋದೆ ನಿನ ಮಗ**

। ,,ಮಪಪಾಪಮ ಪ ದ ದಪಪಮಮಪ । ಗಾ ರಿ ಗ ಗಾ ಗರಿ ಸರಿರಿಗ ರಿಸಸಾ ।
**ಹ ಣವ ನ್ನು ಕೊಡುವೆ ನೆಂ ದು ಗುಣದಿಂದ ಎ ನ್ನ ತಂದ**
। ಗ ಗಗಾ,, ಗಾರೀಗಾರಿಸಸಾ । ಗ ಗ ಗಾ,, ಗಾಗಾಗಾ ಗರಿಸಾ ।
**ಹಣವ ಕೇಳಿ ದ ರೆ ಲ್ಲಿ ಹಣವ ತ ಲ್ಲಣ ಪ**
। ರಿ ಗ ಗಾ,, ಪ ಪ ಪಾಮಾ ಗರಿಗಾ । ಮಪಪಾ,, ಪಾ ಪಾಮಾಗಾಮಾ । ಪದನಿದಸ̇ನಿರಿ̇ಸ̇ನಿದಪಮಗರಿಸಾ ।
**ಲ್ಲಣವ ಕುದುರೆ ಯ ಬೊ ಕ್ಕ ಣವ ಹೋಗೆ ನ್ನು ತಾನೆ**

। ,,ಮಪಪಾಪಮ ಪ ದ ದಪಪಮಮಪ । ಗಾ ಗ ಗ ಗಾ ರಿಗಸರಿರಿಗ ರಿಸಸಾ ।
**ಬ ಳೆಯನ್ನು ಕೊಡುವೆ ನೆಂ ದು ಬಲುಮಾತಿ ನಿಂದ ತಂದ**
। ರಿ ಗಗಾ ಗಾರೀಗಾರೀಸಾ । ರಿ ಗ ಗಾ ರಿಗಗಾಮಗರಿ ಸಸಸ ।
**ಬಳೆಯ ಕೇಳಿ ದ ರೆ ಲ್ಲಿ ಬಳೆಯ ಗ ದ್ದೆ ಯೊಳಗಿನ**
। ರಿಗ ಗಾ ಗಾ ಗಾಮಗರಿಸ ಸಸ । ರಿಗ ಗಾ ಪಾ ಪಾಪಮ ಗ ರಿ ಗಾ । ಮಪಪಾ ನೀದಾದಾಪಾಪಮ ।
**ಕಳೆಯೆ ಊರ ಮುಂದಿನ ಗೆಳೆಯ ನಿನ್ ಕೈಕಾಲ್ ಹಿಡಿದು**
। ಮಪಪಾ ನೀ ದಾದಾಪಾಪಮ । ಪಾಪಾದಪ ಮಮಾಪಮ ಗಾಗಾಮಗರೀಸಾ ।
**ಸೆ ಳೆಯೆ ಹೋಗೆನುತಾನೆ**

**ಮೊದಲನೆಯ ಚರಣದಂತೆ**

**ಕಡುಗವ ಕೊಡುವೆನೆಂದು ಸಡಗರದಿ ಎನ್ನ ತಂದ ಕಡಗ ಕೇಳಿದರೆಲ್ಲಿ**
**ಕಡಗ ಅಂಬರದಲ್ಲಿನ ಗುಡುಗ ಎಲೆ ಮ್ಯಾಗಿನ ಧಡಗ ಹೋಗೆನ್ನುತಾನೆ**

**ಬುಗುಡಿಯ ಕೊಡುವೆನೆಂದು ಬೆಡಗೀಲಿ ಎನ್ನ ತಂದ ಬುಗುಡಿ ಕೇಳಿದರೆಲ್ಲಿ**
**ಬುಗುಡಿ ಪಾಂಡವರಾಡಿದ ಪಗಡಿ ಛೀಅನ್ನುತಗಡಿ ಹೋಗೆನ್ನುತಾನೆ**

**ವಾಲೆಯ ಕೊಡುವೆನೆಂದು ವಾಲಗದಿಂದ ತಂದ ವಾಲೆಯ ಕೇಳಿದರೆಲ್ಲಿ ವಾಲೆ ಕನ್ನಡಿಯ**
**ಕಪೋಲೆ ಈವಿಗಿಷ್ಟದ್ದು ವಾಲೆ ನಿನ ಕಾಲಿಗೆ ಸಂಕೋಲೆ ಹೋಗೆನ್ನುತಾನೆ**

**ಆದಿಕೇಶವನ ಮ್ಯಾಲೆ ಆಣೆಯಿಟ್ಟು ಕರೆದು ತಂದ ಆಣೆ ಎಲ್ಲಿಹುದೆಂದ ಬರೆದ ಆನಂದದಿಂದ ಬೆರೆದ**
**ಬೀದಿಯಲ್ಲಿಂದ ಕರೆದ ಹೀಂಗೆ ಧರೆಯೊಳು ಮೆರೆದ ನಮ್ಮ ಕೃಷ್ಣರಾಯ**

## ಏಕೆ ದಯವಿನಿತಿಲ್ಲ

ಏಕೆ ದಯವಿನಿತಿಲ್ಲ ಲೋಕ ಪಾವನಮೂರ್ತಿ
ಬೇಕೆಂದು ನಿನ್ನ ಪಾದವ ನಂಬಿದವರನೇ

ಎಡರಿದ ಸ್ವರವಿಲ್ಲ ಕಡನ ನಂಬುವರಿಲ್ಲ
ಬಡವನೆಂದೊಡವೆಗಳ ಕೊಡುವರಿಲ್ಲ
ಧೃಡದಲಿದ್ದವರು ನೋಡರು ಕಣ್ ತೆರೆದು
ಎನ್ನೊಡೆಯ ನೀ ನೋಡದಿಹುದು ಸರಿಯಲ್ಲ

ಕರೆದು ಕೊಡುವವರಿಲ್ಲ ಸಿರಿವಂತ ನಾನಲ್ಲ
ಪರಮಾತ್ಮ ನಿನ್ನನ್ನು ಅರಿತವನು ನಾನಲ್ಲ
ಮರೆದುಕೊಂಡಿರಲು ಸಜ್ಜನರ ಗೆಳೆತನವಿಲ್ಲ
ಪರಮಹಂಸನೆ ಹರಿಸೊ ಕೊರತೆಗಳನೆಲ್ಲ

ನೀಲವರ್ಣದಲೋಲ ಕಾಲನವನಿಗೆ ಶೂಲ
ಬಾಲತನದಲಿ ಹಾಲ ಸವಿದ ಗೋಪಾಲ
ನಾಲಿಗೆಗೆ ನಿನ್ನಯ ವಿಶಾಲ ಅಷ್ಟಾಚರಣ
ಪಾಲಿಸೈ ಕಾಗಿನೆಲೆಯಾದಿಕೇಶವನೆ

ರಾಗ: ಸ ಗ² ಪ ನಿ² ಸ ಖಂಡ ಛಾಪು

। ,,ಪಸಾನಿ ಪಾಪಾ । ಗಾಪಾಗಾಗಾಸಾ । ಸನೀ ಸ ಗಾ,,ಪಾಪಾನೀ ನೀ ।
**ಏ ಕೆ ದಯ ವಿ ನಿ ತಿ ಲ್ಲ ಲೋಕ ಪಾ ವ ನ ಮೂರ್ತಿ**

। ,,ಗಪಾಸನೀನೀ । ಸಾಸಾ ನಿಸಗಾ,, । ಸನಿನೀ ನೀಸನಿಪಾ । ಗಾಸಾಸಾಗಪಸನಿ ।
**ಬೇ ಕೆಂ ದು ನಿ ನ್ನ ಪಾ ದವ ನಂ ಬಿ ದ ವ ರ ನೇ**

। ,,ಸನೀಸಗಾ,, । ಪಾಪಾಪಾಸನಿನೀ । ,,ಸನೀಪ ಗಾ,, । ಗಾಪಾಗಾ,,ಸಾ ।
**ಎಡರಿದ ಸ್ವ ರ ವಿ ಲ್ಲ ಕಡ ನ ನಂ ಬುವ ರಿ ಲ್ಲ**

। ,,ಸನೀಸಗಾ,, । ಪಾ ಗಾಸಾಸಾಸಾ । ,,ಗ ಪಾನಿಪಾಗಪ । ಪಸನೀ,,,,,, ।
**ಬಡವನೆಂ ದೊಡ ವೆ ಗ ಳ ಕೊಡುವರಿ ಲ್ಲ**

। ,,ಪ ಗಾಪಸ ನೀ, । ಸಾಸಾಸಾ ಸಾ,, । ಸಾಸಾ ಸನಿನೀ,, । ಸಾಸಗಸದಾ,,, ।
**ಧೃಡ ದೊಳಿ ದ್ದವರು ನೋ ಡರು ಕ ಣ್ ತೆ ರೆ ದು**

। ಗಾಪಾ ಗಾಸಾಸಾ । ನೀ,,ನಿಪನಿಪಪಾ । ಗಾಪಾಗಾ ಸಾಸಾ । ಗಾಪಾಪಸನೀ,, ।
**ಎ ನ್ನೊಡೆ ಯ ನೀ ನೋ ಡ ದಿಹುದು ಸ ರಿ ಯ ಲ್ಲ**

। ,,ಗಸಾಗಾ ಪಾಪಾ । ನಿಪಗಾಪಸನೀನೀ । ,,ನಿಸಾನಿಪಾಪಾ । ಗಾ,ಪಗಾಸಾಸಾ ।
**ಕರೆ ದು ಕೊಡು ವ ವ ರಿ ಲ್ಲ ಸಿರಿ ವಂ ತ ನಾ ನ ಲ್ಲ**

। ,,ನಿಸಾಸಾ,ಸಾ । ,,ಗಪಾಗಾ,ಸಾ । ,,ನಿನೀನಿನೀನೀ । ಪಾಗಪಪಸನೀನೀ ।
**ಪರಮಾತ್ಮ ನಿ ನ್ನ ನ್ನು ಅರಿತವನು ನಾ ನ ಲ್ಲ**

। ,,ನಿ ಪಾನಿ ಸಾ,, । ಸಾಸಾಸಾ,, ಸಾ । ಸಾಸಾಸಾ, ನಿಸಾ । ಸಾನೀಸಗಾ,ಗಾ ।
**ಮೆರೆ ದುಕೊಂ ಡಿ ರ ಲು ಸ ಜ್ಜನ ರ ಗೆಳೆ ತ ನ ವಿ ಲ್ಲ**

। ,,ಗಸಾಸ ಸಾ,, । ಸನಿಪಾ ಪಾನೀಸಾ । ,,ಸ ನೀಪಗಾಪಾ । ಗಾ,,ಸಾ,,,, ।
**ಪರ ಮಹಂ ಸ ನೆ ಹ ರಿ ಸೊ ಕೊರ ತೆಗ ಳ ನೆ ಲ್ಲ**

। ,,ಸನೀಸಗಾ,, । ಪಾ ಗಾಪಸನೀನೀ । ,,ನಿಸಾನಿಪಾಪಾ । ಗಾಪಾ ಗಾ,,ಸಾ ।
**ನೀ ಲವ ರ್ಣದ ಲೋ ಲ ಕಾ ಲನ ವ ನಿ ಗೆ ಶೂಲ**

। ,,ಸನೀಸಗಾಗಾ । ಗಾಗಾ ಪಾ,,ಪಾ । ,,ಗಪಾನಿ ಪಪಗಾ । ಪಸನೀನೀ,,,, ।
**ಬಾ ಲತನ ದ ಲಿ ಹಾ ಲ ಸವಿ ದ ಗೋ ಪಾ ಲ**

। ,,ಪಾ,ನಿಸಾಸಾ । ,,ನಿಸಸಾಸಾ ನೀ । ಸಾ,,ಸಾ,, ನೀ । ಸನಿನೀಸಗಗಾಗಾ ।
**ನಾಲಿಗೆ ಗೆ ನಿ ನ್ನಯ ವಿ ಶಾ ಲ ಅ ಷ್ಟಾ ಚ ರ ಣ**

। ಗಾಪಾಗಾಸಾ,, । ಸನಿಸನಿಪಾಪನಿಸಾ ।,,ಪನೀಪಾಗಾ,, । ಗಸಸಾನಿಸಗಪನೀ ।
**ಪಾ ಲಿ ಸೈ ಕಾ ಗಿ ನೆ ಲೆ ಯಾದಿ ಕೇ ಶ ವ ನೆ**

## ಏನು ಇಲ್ಲದ ಎರಡು ದಿನದ ಸಂಸಾರ

ಏನು ಇಲ್ಲದ ಎರಡು ದಿನದ ಸಂಸಾರ
ಜ್ಞಾನದಲಿ ದಾನಧರ್ಮವ ಮಾಡಿರಯ್ಯ

ಹಸಿದು ಬಂದವರಿಗೆ ಅಶನವೀಯಲು ಬೇಕು
ಶಿಶುವಿಗೆ ಪಾಲ್ಬೆಣ್ಣೆ ನಡೆಸಬೇಕು
ಹಸನಾದ ಭೂಮಿಯನು ಧಾರೆ ಎರೆಯಲು ಬೇಕು
ಭಾಷೆ ಕೊಟ್ಟಾ ಬಳಿಕ ನಿಜವಿರಲುಬೇಕು

ಕಳ್ಳತನಗಳ ಮಾಡಿ ಒಡಲು ಹೊರೆಯಲು ಬೇಡ
ತಳ್ಳಿಗಾರನು ಆಗಿ ತಿರುಗ ಬೇಡ
ಕುಳ್ಳಿರ್ದ ಸಭೆಯೊಳಗೆ ತಿಳಿವ ನಡೆಸಲು ಬೇಡ
ಉಳ್ಳವನು ನಾನೆಂದು ಉಬ್ಬಬೇಡ

ದೊರೆತನವು ಬಂದಾಗ ಕೆಟ್ಟ ನುಡಿಯಲು ಬೇಡ
ಸಿರಿ ಬಂದ ಕಾಲಕ್ಕೆ ಮೆರೆಯಬೇಡ
ಸಿರಿವಂತ ಶ್ರೀ ಕಾಗಿನೆಲೆಯಾದಿ ಕೇಶವನ
ಚರಣ ಕಮಲವ ಸೇರಿ ಸುಖಿಯಾಗು ಮನುಜ

**ರಾಗ: ಖಾನಡ** ಸ ರಿ ಗ ಮ ಪ ಮ ದಾ ನಿ ಸ ಸ ನಿ ದ ಪ ಗಾ ಮ ರಿ ಸ **ಖಂಡ ಛಾಪು**

। ,,ದನೀಸ ನೀಪಾ । ಗಮಗಮ ರೀರೀಸಾ । ,,ದನೀಸ ರೀಸಾ । ರೀಪಾಗಮಗಮಮರಿ ॥
**ಏ ನು ಇ ಲ್ಲ ದ ಎ ರ ಡು ದಿ ನ ದ ಸಂ ಸಾ ರ**

। ,,ಗಗಾಮರೀಸಾ । ,,ನಿದಾಮಪಾ,, । ಗಾ ಮಾ ದಾ,,ನೀ । ಸನಿರಿಸನಿನಿನೀಪಾ ॥
**ಜ್ಞಾನ ದಲಿ ದಾ ನಧ ರ್ಮವ ಮಾಡಿ ರ ಯ್ಯ**

। ,,ನಿದಾಮ ಪಾ,, । ಗಮಗಮರೀರೀಸಾ । ,,ನಿಸಾರಿಗಾ,ಮ । ರೀ ರೀ ಸಾ,,ಸಾ ॥
**ಹಸಿ ದು ಬಂ ದ ವ ರಿ ಗೆ ಅಶನವೀ ಯಲು ಬೇ ಕು**

। ,,ನಿಸಾರೀರೀ,, । ರೀ,,ರೀ,,ರಿಸ । ,,ರಿರೀಸರೀಪಾ । ಗಾ,,ಗಮಗಮಗಾ ॥
**ಶಿಶುವಿ ಗೆ ಪಾ ಲ್ಬೆ ಣ್ಣೆ ನಡೆಸಬೇ ಕು**

। ,,ಪ ಪಪಮಮಗಗಮ । ಮದಾ,ದಾದಾದಾ । ,,ಗಮಾದ ಸನಿರಿಸ । ಸನಿಸನಿ ನಿದದಾದಾ ॥
**ಹಸ ನಾ ದ ಭೂ ಮಿಯನು ಧಾ ರೆ ಎ ರೆ ಯಲು ಬೇ ಕು**

। ,,ದನೀಸ ಗಮಗಮ । ರೀ,, ಸಾಸಾಸಾ । ,,ನಿಸಾನಿಪಾಪಾ । ಗಾ,ಮಗಾ,ಮಗಮದನಿಸಾ ।
**ಭಾ ಷೆ ಕೊ ಟ್ಟಾ ಬ ಳಿ ಕ ನಿಜ ವಿರ ಲು ಬೇ ಕು**

। ,,ರಿಪಾಮಪಾಪಾ । ಗಮಗಮ ರೀರೀಸಾ । ,,ನಿಸಾರಿ ರೀ ರೀ । ಗಮಗಮ ಸರೀ,ಸಾ ॥
**ಕ ಳ್ಳ ತ ನ ಗ ಳ ಮಾ ಡಿ ಒಡಲು ಹೊರೆ ಯ ಲು ಬೇ ಡ**

। ,,,ನೀಸ ರೀ,, । ರಿಮರಿಮ ಸರೀ,ರೀ । ,,ರಿರೀಸ ರೀನಿದ । ಮಗಾ,ಗಮಗಮಗಾ ।
**ತಳ್ಳಿಗಾ ರ ನು ಆ ಗಿ ತಿರುಗ ಬೇ ಡ**

। ,,ಪಾಪಮಮಗಮಾ । ದಾದಾದಾ ದಾದಾ । ,,ಗಮಾದ ಸಾಸಾ । ಸನಿರಿಸ ಸನಿನಿದದಾ ॥
**ಕು ಳ್ಳಿ ರ್ದ ಸ ಭೆ ಯೊಳ ಗೆ ತಿ ಳಿ ವ ನ ಡೆ ಸ ಲು ಬೇ ಡ**

। ,,ನಿಸಾರಿ ರೀರೀ । ಗಾ,ಮರೀರೀಸಾ । ,,ನಿರೀಸ ನೀಪ । ದಮಗಮಗಮದನಿಸಾ ॥
**ಉ ಳ್ಳವ ನು ನಾ ನೆಂ ದು ಉ ಬ್ಬಬೇ ಡ**

**ಮೊದಲನೆಯ ಚರಣದಂತೆ**

**ದೊರೆತನವು ಬಂದಾಗ ಕೆಟ್ಟ ನುಡಿಯಲು ಬೇಡ**
**ಸಿರಿ ಬಂದ ಕಾಲಕ್ಕೆ ಮೆರೆಯಬೇಡ**
**ಸಿರಿವಂತ ಶ್ರೀ ಕಾಗಿನೆಲೆಯಾದಿ ಕೇಶವನ**
**ಚರಣ ಕಮಲವ ಸೇರಿ ಸುಖಿಯಾಗು ಮನುಜ**

# ಏನು ಕಾರಣ ಬಾಯ ತೆರೆದಿ ಪೇಳಲೊ

ಏನು ಕಾರಣ ಬಾಯ ತೆರೆದಿ ಪೇಳೆಲೊ
ದಾನವಾಂತಕ ಅಹೋಬಲ ನಾರಸಿಂಹನೆ

ನಿಗಮ ಚೋರಕನ ಕೊಲಲು ತೆರೆದೆಯೋ ಬಾಯ
ನಗವ ಬೆನ್ನಲಿ ಹೊತ್ತು ನಡುಗಿ ತೆರೆದೆಯೋ ಬಾಯ
ಭೂಮಿಗಳ್ಳನ ಕೊಂದು ಬಳಲಿ ತೆರೆದೆಯೋ ಬಾಯ
ಜಗವರಿಯೆ ಪೇರುರವಿರದ ಪ್ರಹ್ಲಾದವರದ

ನಾರಿಯರ ಚೆಲ್ವಿಕೆ ನೋಡಿ ತೆರೆದೆಯೋ ಬಾಯ
ಏರಿ ಅಶ್ವವ ಮೆಟ್ಟಿ ಅಳಲಿ ತೆರೆದೆಯೋ ಬಾಯ
ಮಾರಪಿತ ಸಿರಿ ಕಾಗಿನೆಲೆಯ ಆದಿಕೇಶವ ರಂಗ
ಧೀರ ಶ್ರೀನಾಥ ಭವನಾಶ ಪೇಳೋ

ರಾಗ: ಖರಹರಪ್ರಿಯ ಸ ರಿ ಗ ಮ ಪ ದ ನಿ ಸ ಮಿಶ್ರ ಛಾಪು

। ದಸಾ,ಸಾ ಸರಿಮಗಗರಿರಿಸ । ಪದನೀದಾ ಪಮಗಾಗರಿರೀ । ,,,ಪಾದದಸಾ, ,,,, । ಸರಿಸರೀ,ನೀ,,ದಾ,, ।
**ಏ ನು ಕಾ ರ ಣ ಬಾ ಯ ತೆ ರೆ ದಿ ಪೇಳೆಲೊ**

। ,,,ಪಾದಸರೀ,ರೀರೀ । ,,,,ಸಾಸರಿಗಾರೀಸದ । ಪದನೀದಾಪಮಗಾರೀಗಾ । ರೀ,,ಮಾಪದಾನಿದಪಾದಸಾ ।
**ದಾನವಾಂತ ಕ ಅಹೋ ಬ ಲ ನಾ ರ ಸಿಂ ಹ ನೆ ನಾ ರಸಿಂ ಹ ನೆ**

। ,,ದನೀದ ದಾ, ದದಾದಾ । ,,ದ ನೀಪ ಗಾರೀಮಾಮಾ । ಪಾ;;ಪಾ;;; । ;;; ;;;; ।
**ನಿಗ ಮ ಚೋರಕ ನ ಕೊಲಲು ತೆ ರೆ ದೆ ಯೋ ಬಾ ಯ**

। ,,ಗಪಾದ ದಾಸ ನಿ ನಿದ ದಾ । ,,ಸಗಾ ರಿ ಸನಿದಾದನಿಸಾ । ಸಾ;;ಸಾ;;; ।
**ನಗ ವ ಬೆ ನ್ನಲಿ ಹೊತ್ತು ನಡುಗಿ ತೆ ರೆ ದೆ ಯೋ ಬಾ ಯ**

। ,,,ಪಾ ದ ಸರಿಮಗಗರಿರೀ । ,,ಸರೀ ಮ ಮಗಗರಿರಿಸಸಾ । ,,ರಿಮಾಗ ರಿಸನಿಸದಾನೀ । ಸಾ;;ಸಾ;;; ।
**ಭೂಮಿಗ ಳ್ಳ ನ ಕೊಂದು ಬ ಳ ಲಿ ತೆರೆ ದೆಯೋ ಬಾ ಯ**

। ,,ಸಾರೀಮಗಗರಿರಿಸ ಸಾ । ದಾಸನಿನಿದದಪಪಾ,, ಮಗ । ಗರಿಮಗಗರಿಸಸಾ,, ಗಪಾ । ದಾಸನಿನೀ;;;; ।
**ಜ ಗ ವ ರಿ ಯೆ ಪೇ ರುರ ವಿ ರಿ ದ ಪ್ರ ಹ್ಲಾ ದ ವರ ದ**

। ,,,ದಾದದಾದಾ,, ದಾ । ದದಾ ನೀ ಪ ಗಾರೀಮಾಮಾ । ಪಾ;;ಪಾ;;; । ;;; ;;;; ।
**ನಾರಿಯರ ಚೆ ಲ್ವಿಕೆ ನೋಡಿ ತೆ ರೆ ದೆ ಯೋ ಬಾ ಯ**

। ,,,ಗಾಪ ದಸಸ ನಿ ನಿದದಾ । ,,ಸಗಾರಿ ಸನಿನಿದದಪದಾ । ಸಾ;;ಸಾ;;; । ;;; ;;;; ।
**ಏ ರಿ ಅ ಶ್ವವ ಮೆ ಟ್ಟಿ ಅಳ ಲಿ ತೆ ರೆ ದೆ ಯೋ ಬಾ ಯ**

। ,,ಪಾ, ದಸಾರೀ ರೀರೀ । ಸಾರೀಮಗಗರಿರಿಸಸಾ,, । ,,,ಸಗರಿ ಸನಿನೀದಪದಾ । ದಸಾ,,,ಸಾ;;; ।
**ಮಾರ ಪಿ ತ ಸಿ ರಿ ಕಾ ಗಿ ನೆ ಲೆ ಯ ಆ ದಿಕೇ ಶ ವ ರಂ ಗ**

। ಸರಿಮಗಗರಿರಿಸಾ,, ಸಾ । ನಿದಸನಿನಿದದಪಾ, ಗಾಗಾ । ಗರಿಮಗಗರಿರಿಸಾ ಗಪಾ । ದಾಸದಸಾ;;;; ।
**ಧೀ ರ ಶ್ರೀ ನಾ ಥ ಭವ ನಾ ಶ ಪೇ ಳೋ**

# ಏನು ಬರುವುದೊ ಸಂಗಡೇನು ಬರುವುದೊ

ಏನು ಬರುವುದೊ ಸಂಗಡೇನು ಬರುವುದೊ

ದಾನ ಧರ್ಮ ಮಾಡಿ ಬಹು ನಿಧಾನಿ
ಎನಿಸಿಕೊಳ್ಳೊ ಮನುಜ

ಎನ್ನದೆಂದು ತನ್ನದೆಂದು ಹೊನ್ನು ಹೆಣ್ಣು ಮಣ್ಣಿಗಾಗಿ
ಬನ್ನಪಟ್ಟು ಬಾಯ ಬಿಡುವೆ ಬರಿದೆ ಮೋಹದಿ
ಕನ್ನು ಕದಲಿ ಪರಹಿತಾರ್ಥ ಮಾಡಿ ಪುಣ್ಯ ಪಡೆಯೊ ನೀನು
ಮುನ್ನ ಕ್ರೂರ ಫಣಿಯ ಕೂಪದಂತೆ ಕೆಡಲುಬೇಡ

ಕಟ್ಟಲಿಲ್ಲ ಬಿಚ್ಚಲಿಲ್ಲ ಕಷ್ಟಪಟ್ಟು ಬಳಲಲಿಲ್ಲ
ಸುಟ್ಟು ಸುಟ್ಟು ಸುಣ್ಣದ್ದರಳು ಆಯಿತೀ ಕಾಯ
ಬಿಟ್ಟು ಹೋಗುವಾಗ ಚೋಟು ಬಟ್ಟೆ ನಿನಗೆ ಹೊಂದಲಿಲ್ಲ
ದೃಷ್ಟ ನೋಡು ಕಟ್ಟ ಕಡೆಗೆ ಬಯಲಾಗುತಿದೆ

ಗರುವದ ಹೊರೆಯಿಂದ ನೀ ಬರಿದೆ ಕಾಲ ಕಳೆದೆಯೊ
ಅರಿತು ನೋಡು ನರರ ತನುವು ದೊರಕಲರಿಯದು
ನೆರೆ ಮಹಾಮೂರ್ತಿ ಒಡೆಯ ಬಾಡದಾದಿಕೇಶವ
ಚರಣ ಭಜಿಸಿ ಚಂಚಲವಳಿದು ವರವ ಪಡೆದು ಹೊಂದು ಮುಕುತಿ

ರಾಗ:ಮಧ್ಯಮಾವತಿ ಸ ರಿ೨ ಮ೧ ಪ ನಿ೨ ಸ ಆದಿತಾಳ

। ,,ಪರಿರೀ ಸಸ ಸಾರಿಸ ನೀಪಾ । ಪನಿನೀ ಸರಿ ರೀ । ಸಾ,, ,,ನಿಪ ।
ಏ ನು ಬರುವುದೊ ಸಂಗ ಡೇನು ಬರುವು ದೊ
। ,,ಪ ರಿ ರೀರಿ ಸರಿ ಸರೀ ನಿ ನಿ ನಿ । ನಿಸನಿಸಾ ನಿನಿಪ । ಮಪಪಮ ರಿ ರಿ ಸಾ ।
ದಾನ ಧರ್ಮ ಮಾಡಿ ಬಹು ನಿ ಧಾನಿ ಎನಿಸಿ ಕೊ ಳ್ಳೊ ಮನುಜ

। ,,ಮಾಪನೀ ನಿ ಸಾಸರಿರೀ ರೀ । ರಿಮಮಾಪಮ ಮರಿರಿಸ । ನೀಸಾಸಾಸಾ ।
ಎ ನ್ನದೆಂದು ತ ನ್ನದೆಂದು ಹೊನ್ನು ಹೆ ಣ್ಣು ಮಣ್ಣಿಗಾಗಿ
। ,,ಪರಿರಿ ರೀಸ ನಿಸಸಾರಿಸ ನಿನಿ ಪ । ಪನಿನೀ ಸಾ ರೀಗರಿ । ಸಾ,, ,,,, ।
ಬ ನ್ನಪಟ್ಟು ಬಾಯ ಬಿಡುವೆ ಬರಿದೆ ಮೋಹ ದಿ
। ,,ಪರಿರಿ ರಿರಿರಿ ಸರಿಸರಿಸನಿನೀ । ,,ಪಸ ಸ ಸಾಸ । ನಿಸನಿಸ ನಿಪಪಾ ।
ಕ ನ್ನು ಕದಲಿ ಪರಹಿತಾ ರ್ಥ ಮಾಡಿ ಪುಣ್ಯ ಪಡೆಯೊ ನೀನು
। ಸರಿ ಸರೀ ಸನಿ ನಿ ನಿ ಸನಿಸಾ ನಿನಿಪ । ಪನಿಪನೀ ಪಮಮ । ರಿಪಮರಿ ರಿ ಸ ಸಾ ।
ಮುನ್ನ ಕ್ರೂರ ಫಣಿ ಯ ಕೂಪ ದಂತೆ ಕೆಡಲು ಬೇಡ ಮನುಜ

ಮೇಲಿನಂತೆ
ಕಟ್ಟಲಿಲ್ಲ ಬಿಚ್ಚಲಿಲ್ಲ ಕಷ್ಟಪಟ್ಟು ಬಳಲಲಿಲ್ಲ
ಸುಟ್ಟು ಸುಟ್ಟು ಸುಣ್ಣದ್ಧರಳು ಆಯಿತೀ ಕಾಯ
ಬಿಟ್ಟು ಹೋಗುವಾಗ ಚೋಟು ಬಟ್ಟೆ ನಿನಗೆ ಹೊಂದಲಿಲ್ಲ
ದೃಷ್ಟ ನೋಡು ಕಟ್ಟ ಕಡೆಗೆ ಬಯಲಾಗುತಿದೆ

ಗರುವದ ಹೊರೆಯಿಂದ ನೀ ಬರಿದೆ ಕಾಲ ಕಳೆದೆಯೊ
ಅರಿತು ನೋಡು ನರರ ತನುವು ದೊರಕಲರಿಯದು
ನೆರೆ ಮಹಾಮೂರ್ತಿ ಒಡೆಯ ಬಾಡದಾದಿಕೇಶವ
। ಪರಿಸರೀ ಸನಿನಿ ನೀ ಸನಿನಿಪಪ । ಪಸಸನಿ ಪನಿ ನಿಪ । ಮಾ ಪಮ ರಿ ರಿ ಸಾ ।
ಚರಣ ಭಜಿಸಿ ಚಂಚಲವಳಿದು ವರವ ಪಡೆದು ಹೊಂದು ಮುಕುತಿ

# ಏನೆ ಮನವಿತ್ತೆ

ಏನೆ ಮನವಿತ್ತೆ ಲಲಿತಾಂಗಿ ಅಸ–
ಮಾನ ಗೋವಳ ಕುಲವಿಲ್ಲದವನೊಳು

ಮಗಗೆ ಮೈದುನನಾದ ಮಗಳಿಗೆ ಪತಿಯಾದ
ಮಗಳಿಗಳಿಯನಾದ ಅಳಿಯಗಳಿಯನಾದ

ಮಗಳ ಮಗಗೆ ಮೈದುನನಾಗಿ ಮಾವನ
ಜಗವರಿಯಲು ಕೊಂದ ಕುಲಗೇಡಿ ಗೋವಳ

ಅತ್ತೆಗೆ ವಲ್ಲಭನಾದ ಭೃತ್ಯರಿಗಾಳಾದ
ಚಿತ್ತ ಒಲಿದು ಚೆನ್ನ ಆದಿಕೇಶವನೊಳು

ರಾಗ: ಬಹುದಾರಿ ಸ ಗ ಮ ಪ ದ ನಿ ಸ ಸ ನಿ ಪ ಮ ಗ ಸ ಆದಿತಾಳ

। ,,,ಪಸಾನಿಪ ,,ಗ ಮಾಗಾ । ಗ ,ಸನೀಸಮಾ । ಗಾ,, ,,,, ॥
ಏ ನೆ ಮನ ವಿ ತ್ತೆ ಲಲಿತಾಂ ಗಿ

। ಗಮಾಪಾ,ದಾ ನೀದದಪದನಿಸಾ,ನಿಪಾ । ,,ನಿ ಪಾಮಾಗ । ಸಾಗಸಾಗ ಮಾ ॥
ಅಸ ಮಾನ ಗೋ ವಳ ಕುಲ ವಿ ಲ್ಲ ದವ ನೊಳು

। ,,ಪ ದಾನೀ ಪಾ ದ ನೀಸಾ,ಸಾ । ,,ನಿ ಸಾಗಗಾ । ಮಪಮಪಾ,ಗಾ, ಗಾ ॥
ಮಗ ಗೆ ಮೈದುನ ನಾದ ಮಗ ಳಿಗೆ ಪ ತಿ ಯಾದ

। ,,ಸ ಮಾಗಸಾನಿಪಾದನೀಸಾ । ,,ಗ ಸಾನಿಪಾ । ಗಸಾ ಗಮಾಪಾ ॥
ಮಗ ಳಿಗ ಳಿಯನಾ ದ ಅಳಿಯಗ ಳಿಯನಾ ದ

। ,,ಪ ದಾನಿ ಪಾದನಿನಿಸಾ,ಸಾ । ನಿ ಸಾಗಾ,ಗಾ । ಮಪಮಪಗಾಗಸ ॥
ಮಗ ಳ ಮಗ ಗೆ ಮೈ ದುನ ನಾ ಗಿ ಮಾ ವ ನ

। ,,ಸ ಮಾಗಸಾನಿ ಪಾ ದನೀ ಸಾ । ,,ಗ ಸಾನೀಪ । ಗಮಗಮಸಗ ಮಾ ॥
ಜಗ ವರಿಯಲು ಕೊಂದ ಕುಲ ಗೇಡಿ ಗೋ ವಳ

। ,,,ದಾನಿ ಪಾ ದಾದ ನಿಸಾ ಸಾ । ,,,ಸಾ ಗ ಗಾ । ಮಪಮಪಾ,ಗಾ,ಗಾ ।
ಅ ತ್ತೆಗೆ ವ ಲ್ಲಭನಾದ ಭೃತ್ಯರಿ ಗಾ ಳಾ ದ

। ,,ಸಮಾಗ ಸ ನಿಪಾ ದನೀಸಾ । ಸಗಸನಿಸನಿಪನಿಪ । ,ಗಸಾಗ ಮಾ ॥
ಚಿ ತ್ತ ಒಲಿದು ಚೆ ನ್ನ ಆ ದಿ ಕೇ ಶವ ನೊಳು

# ಏನೆಂದಳೇನೆಂದಳೋ

ಏನೆಂದಳೇನೆಂದಳೋ ನಿನ್ನೊಳು ಸೀತೆ ಹನುಮಯ್ಯ

ಜನಕನರಮನೆಯಲ್ಲಿ ಜನಿಸಿ ಸುಖದಲ್ಲಿರಲು
ಧನು ಮುರಿದು ಕೈಪಿಡಿದ ತನ್ನ
ಘನ ಪದವಿಯನು ಬಿಟ್ಟು ವನವ ಸೇರಿದೆನೆಂದು
ವನಿತೆ ಶಪಿಸುತೆ ಮನದಿ ನೊಂದು

ಕುರುಹಿನುಂಗುರವನು ತಹರಳಾಕ್ಷಿಗಿತ್ತಾಗ
ತಿರುಳಿಗಿಂತಧಿಕವೇ ಕರಟವೆಂದು
ಬೆರಳಿಂದ ಚಿಮ್ಮಿದಳೆ ಅಶೋಕವನದಾಚೆಗೆ
ನಿರುತ ಸಂತಾಪದಲಿ ಮನದಿ ನೊಂದು

ಸೇತುವೆಯ ಕಟ್ಟಿ ಸಿಂಧುಗೆ ವಿಭೀಷಣಾಗ್ರ
ಜಾತ ಲಂಕಾಧಿಪನ ವಧಿಸಿ
ಸೀತೆಯನು ಸೆರೆಯಿಂದ ಬಿಡಿಸಿದ್ದೆ ಆದರೆ
ನಾಥಾದಿಕೇಶವಗೆ ಬಿರುದು ಎಂದು

**ರಾಗ: ಹಿಂದುಸ್ತಾನಿ ಕಾಪಿ** ಸ ರಿ ಗ ಮ ಪ ದ ನಿ ಸ + ಗ ನಿ **ಆದಿತಾಳ**

। ಪಾ,ಪಾ ಪಪಾಪಾ ದಪಾ,,,ಮಪದಪಾದಪಮಗಾ ರಿಗಮರಿಗರಿಸಾ,,, ನಿಸರಿಗಮರಿಸಾ,,,ರಿಸನೀ,, ಪನಿ ಸಾಸಾರೀ,,ಗಸರೀ,,
**ಏ ನೆಂದಳೇನೆಂದಳೋ ನಿ ನ್ನೊಳು ಸೀ ತೆ ಹನುಮಯ್ಯ**

। ,,ಮಪಾ ನಿ ಪಾಗಾರಿಸಾ,ರೀ । ನೀ,, । ಪಾನೀಸಾರಿ ಗ ॥ ನೀಮಪಾದಪಾ ,,ಗ ರೀ ಸಾನಿ । ಸಾ,, । ,,,, ॥
**ಏ ನೆಂದ ಳೇ ನೆಂದ ಳೋ ನಿ ನ್ನೊಳು ಸೀ ತೆ ಹನುಮ ಯ್ಯ**

। ,,ಪಪಾಪಪಾ ಪ ಪಾಪಾ,ಪಾ । ,,ಮ**ಗಾ**ಸನೀ । ಸ ಸ **ಗ**ಮಾಪಪಾ ॥
**ಜನ ಕನ ಮನೆ ಯಲ್ಲಿ ಜ ನಿ ಸಿ ಸುಖದ ಲ್ಲಿರೆ**

। ,,ಪದಾದ ದಾ ಪದಾ ಪಮಮಾ । ,,ರಿಮಾ ಪನೀ । ದಪಪಾ ಪಾಪಾ ॥
**ಧನುಸು ಮುರಿದು ತ ರ ಲು ಘನ ಪದ ವಿ ಯ ಬಿ ಟ್ಟು**

। ,,ಮಪಾನಿ ನೀ ನಿ ನೀನೀ,,ಸಾರಿಸ । ನೀನಿದಾ ಮಮಾ । ಪಾ,,ಪಾಪಾ ॥
**ವ ನ ವ ಸೇರಿದೆ ನೆಂದು ಘನ ತ ಪ ದಿಂ ದಲಿ**

। ,,ದಾದಾದಾ ದಪಪಾಪಮರಿಮರಿಸಾ । ,,,ಸಾರಿಮಾ । ಪದನೀಸನಿದಾನಿದ ।
**ವ ನಿ ತೆ ಮ ನ ದಿ ನೊಂ ದು**

। ,,ಮಪಾಪಪಾ ಪಾಪಾಪಾ,, । ,,ಮ**ಗಾ**ಸನೀ । ಸಾ**ಗಾ** ಮಾಪಾ ।
**ಕುರು ಹಿನುಂಗು ರ ವ ತ ರ ಳಾ ಕ್ಷಿ ಗೆ ಕೊಡೆ**

। ,,ಪದಾದ ದಾಪದಾ ಮಾ,ಮಾ । ಪದನಿದಪದರಿಸನೀ । ದಪಾ, ।
**ಬರಿ ದು ಮಹಾ ಎಂ ದು ಬೇ ಸ ರ ದೆ**

। ,,ಮಪಾನಿ ನೀ ನಿಸಾನಿಸಾಪಾ । ,,ನಿಪಾ, ಮಾ । ಮಪಾಪಾ,ಪಸ ।
**ಬೀರಿ ದಳೆ ಸೀ ತಾ ಅಶೋಕ ವ ನ ದಿಂದ**

। ,,ದದಾದ ದಾ ಪದಾ,ಪಮಮಾ । ,,ರಿ ಮಾಪನಿದ । ಪಮರಿಗಾ ರಿಸಾ ।
**ನಿರು ತ ಸಂತಾ ಪ ದಿ ಮನ ದಿ ನೊಂ ದು**

। ,,ಮಪಾಪ ಪಾ ಪಾ,,ಪಾ,, । ,,ಮ**ಗಾಗ**ಸಾ । **ಗಾ**ಮಾಪಾ,, ।
**ಸೇತುವೆಯ ಕ ಟ್ಟಿ ರಾ ವಣ ನ ಳಿ ದು**

। ದಾ,ದಾ,ದ ದಪಪದಾಪಮಾ । ಪಮ ಪದನಿದಸನಿ । ದಪಾ, ।
**ಸಂಜಾ ತ ಲಂ ಕಾ ಧಿಪ ನ ಓ ಡಿಸಿ**

। ,,ಮಪಾನಿನೀ ನೀನೀನೀ,, । ,,ನಿನೀನಿಪಾ । ,,,ನೀ,ನೀ ॥ ಸಾ;;; । ನಿಸಗರಿಸಾ,, । ನೀ,ದಪಾ,, ॥(,,ನಿನೀಸಾನಿ । ಸಾ,,ಸಾಸಾ ।)
**ಸೀ ತೆಯ ಸೆರೆ ಯ ಬಿಡಿ ಸಿದ್ದೆ ಆ ದ ರೆ ಬಿಡಿಸಿ ದ್ದೆ ಆ ದರೆ**

। ,,ಸಾಸ ಸಾಸನೀ,ದಪಾಪಾ । ,,ದದಾ ದಪಾ । ಗಾ,ರಿ ಸನಿಸಾ ॥
**ನಾಥ ಆದಿಕೇ ಶವ ಗೆ ಬಲು ಬಿರು ದು ಎಂದು**

## ಏನೆಂದು ಕೊಂಡಾಡಿ ಸ್ತುತಿಸಲೋ ದೇವ

ಏನೆಂದು ಕೊಂಡಾಡಿ ಸ್ತುತಿಸಲೋ ದೇವ
ನಾನೇನು ಬಲ್ಲೆ ನಿನ್ನ ಮಹಿಮೆಯನು ದೇವ

ಹರಿ ಮುಕುಂದನು ನೀನು ನರಜನ್ಮ ಹುಳು ನಾನು
ಪರಮಾತ್ಮನು ನೀನು ಪಾಮರನು ನಾನು
ಗರುಡಗಮನನು ನೀನು ಮರುಳು ಪಾಪಿಯು ನಾನು
ಪರಂಜ್ಯೋತಿಯು ನೀನು ತಿರುಕನು ನಾನು

ತಿರುಪತಿಯ ವಾಸ ಶ್ರೀವೇಂಕಟೇಶನು ನೀನು
ಸ್ಮರಿಸಿ ನಿನ್ನಯ ನಾಮ ಬದುಕುವನು ನಾನು
ಬಿರುದುಳ್ಳವನು ನೀನು ಮರೆಹೊಕ್ಕವನು ನಾನು
ಸಿರಿ ಕಾಗಿನೆಲೆಯಾದಿಕೇಶವನು ನೀನು

ರಾಗ: ದೇಶಾಕ್ಷಿ ಸ ರಿ೨ ಗ೩ ಪ ದ೨ ಸ ಸ ನಿ೨ ದ೨ ಪ ಮ೧ ಗ೩ ರಿ೨ ಸ ಖಂಡ ಛಾಪು

। ,,ಪದಾಸಾ,ಸಾ । ನೀದಾನಿದಮಾಮಾ । ,,ರಿ ಮಾಗಾಸಾರೀ । ನೀದಾಸಾ;; ।
ಏ ನೆಂದು ಕೊಂ ಡಾ ಡಿ ಸ್ತುತಿ ಸ ಲೋ ದೇ ವ
। ,,ಮಗಾಸಾ,ರೀ । ಪಾಪಾ ಪಸನಿದಪಾ । ,,ಪ ದಾಸ ರೀ ಗಾ । ,,ರಿಮಾಗಸರಿನಿಸದನಿ । ಪ
ನಾ ನೇನು ಬ ಲ್ಲೆ ನಿ ನ್ನ ಮಹಿ ಮೆಯನು ಮಾ ಧವ

। ,,ದನೀ ಸ ನಿದಾ, । ದಾನೀಪಾ ಪದಾದ । ,,ನಿದಾಮಾ,ಗಾ । ಪಾಪಾ ಪಾ,,ಪಾ ।
ಹರಿ ಮುಕುಂ ದ ನು ನೀ ನು ನರ ಜ ನ್ಮ ಹುಳು ನಾ ನು
। ,,ಗಮಪದಸನಿನಿದ । ದಾ,, ದದಗರಿಸನಿ । ದಾ ಪನೀದ ಮಾಗಾ । ಪಾ,,ಪಾ,,,, ।
ಪರ ಮಾ ತ್ಮ ನು ನೀ ನು ಪಾ ಮರ ನು ನಾ ನು
। ,,ಮಗಾಸಸಾಸಾ । ಸಾಸಾ ಗಾ,,ಗಾ । ,,ಪ ದಾಸ ರಿಮಾಗ । ಮಗಗರಿ ಗರಿಸಾಸಾ ।
ಗ ರುಡಗ ಮ ನ ನು ನೀ ನು ಮರುಳು ಪಾ ಪಿ ಯು ನಾ ನು
। ,,ಸರೀ ಗಸಾಸಾ । ಸನಿನಿದ ನಿದಮಾಮಾ । ,,ರಿಮಾಗಸಾರೀ । ನಿದಪದಸಾ,,,, ।
ಪರಂಜ್ಯೋತಿ ಯು ನೀ ನು ತಿರು ಕನು ನಾ ನು

। ,,ದನೀಸನೀದಾ । ದಾ,,ದನಿ ಪದಾ, । ,,ಪನೀನಿನೀ,, । ನಿದಸನಿ ನಿದದಪಪಾ ।
ತಿರುಪತಿಯ ವಾ ಸ ಶ್ರೀ ವೇಂಕಟೇ ಶ ನು ನೀ ನು
। ,,ಮಗಾಮ ಪಾಸಾ । ನೀ ದಾ ದಾ,,ದಾ । ,,ಗಮಾಪದಾನೀ । ನಿದಪದಾ,,ಪಾ,, ।
ಸ್ಮರಿ ಸಿ ನಿ ಮ್ಮಯ ನಾ ಮ ಬದು ಕುವವ ನಾ ನು
। ,,ಮಗಾನೀ,ಸಾ । ಗಾಗಾ ಗಾ,,ಗಾ । ,,ಪ ದಾ, ಮಾ ಗರೀರಿ । ಸಮಗಮರಿಗಸಾ,, ।
ಬಿ ರು ದುಳ್ಳ ವ ನು ನೀ ನು ಮೊರೆ ಹೊಕ್ಕವನು ನಾ ನು
। ,,ಸರೀ ಸನೀನೀ । ದಪಪಾಪದಮಾಮಾ । ,,ರಿಮಾಗಸಾರೀ । ನೀದಾಸಾ,,,, ।
ಸಿರಿ ಕಾ ಗಿ ನೆ ಲೆ ಯಾ ದಿ ಕೇ ಶವನು ನೀ ನು

## ಕಂಡೆ ಕಂಡೆ ನಾ

ಕಂಡೆ ನಾ ಕಂಡೆ ತಂಡದ ಹಿಂಡು ದೈವ ಪ್ರಚಂಡ-ರಿಪು
ಗಂಡ ಉದ್ದಂಡ ನರಸಿಂಹನ

ಘುಡುಘುಡಿಸಿ ಕಂಬದಲಿ ಧಡಧಡ ಸಿಡಿಲು ಸಿಡಿಯೆ
ಕಿಡಿಕಿಡಿಸೆ ನುಡಿಯಡಗಲೊಡೆಯನೆ ಮುಡಿವಿಡಿದು
ಘಡಘಡನೆ ನಡುನಡುಗೆ ಘುಡುಘುಡಿಸಿ ಸಭೆ ಬೆದರೆ
ಹಿಡಿಹಿಡಿದು ಹಿರಣ್ಯಕನ ತೊಡೆಯಲ್ಲಿ ಕೆಡಹಿದನ

ಉರದೊಳಪ್ಪಳಿಸಿ ಅರಿ ಶಿರವ ಸರಸರ ಸೀಳಿ
ಪರಿಪರಿಯಲಿ ಚರ್ಮ ಎಳೆದೆಳೆದು ಎಲುಬು ನರ
ನರವನ್ನು ತೆಗೆದು ನಿರ್ಗಳಿತ ಶೋಣಿತ ಸುರಿಯೆ
ಹರಿಹರಿದು ಕರುಳ ಕೊರಳೊಳಗೆ ಇಟ್ಟವನ

ಪುರಜನರು ಹಾಯೆನಲು ಸುರರು ಹೂ ಮಳೆಗರೆಯೆ
ತರತರದ ವಾದ್ಯ ಸಂಭ್ರಮಗಳಿಂದ
ಹರಿಹರಿಯೆ ಶರಣೆಂದು ಸ್ತುತಿಸಿ ಶಿಶು ಮೊರೆಯಿಡುವ
ಕರುಣಾಳು ಕಾಗಿನೆಲೆಯಾದಿ ಕೇಶವನ

**ರಾಗ:ದೇವಾಶ್ರಯ** ಸ ರಿ ಗ ಮ ದ ನಿ ಸ **ಖಂಡ ಛಾಪು**

। ಸಾ,,,,ಸಾ ರಿಸಾ ಸಾ ರಿ ಸಸಸಾ,,,, ಸಾ,,,,ಸಾ ರಿಸಾ ಸಾ ರಿ ಸಸಸಾ,,,,
**ಓಂ ನಾರಸಿಂಹಾಯ ನಮಃ ಓಂ ನಾರಸಿಂಹಾಯ ನಮಃ**

। ಸಾರಿ ಸಾ ಸಾರಿ ಸಾ । ಸರಿ ಸಾ ರಿ ಸಾ ಸ ಸಾ । ಸಾ ರಿ ಸರಿ ಸಾ ರಿ ಸಾ । ಸಾ ಸ ಸಸನೀ ಸರೀ । ;;;; ।
**ಕಂಡೆ ನಾ ಕಂಡೆ ತಂ ಡದ ಹಿಂಡು ದೈವ ಪ್ರ ಚಂಡ ರಿಪು ಗಂಡ ಉ ದ್ದಂಡ ನರಸಿಂಹನ**

। ಗರಿಗರಿಸಸಾ ದಾನಿ । ರೀ,,, ,,,,, । ಗರಿಗರಿ ಸ ಸಾ,,, ।
**ನರಸಿಂಹನ ಕಂಡೆ ನಾ ನರಸಿಂಹನ**

। ಸ ಸ ರಿ ಸರಿ ಸಾರಿ ಸರಿ । ಸ ಸರಿ ಸ ಸಸರಿ ಸಸರಿ । ದನಿದನಿನಿ ದ ನಿ ದ ನಿನಿ । ದ ನಿನಿ ದಮ ದ ಮ ದಸನೀ, ।
**ಘುಡುಘುಡಿಸಿ ಕಂಬದಲಿ ಧಡಧಡ ಸಿಡಿಲು ಸಿಡಿಯೆ ಕಿಡಿಕಿಡಿಸೆ ನುಡಿಯಡಗ ಲೊಡೆಯನೆ ಮುಡಿ ವಿಡಿದು**

। ಗರಿ ಗರಿರಿ ಗರಿ ಗರಿ ರಿ । ಗ ರಿ ಗ ರಿಸ ಗರಿ ಗರಿರಿ । ಮಗಮಗರಿ ಸಸಸ ಸಸ ।
**ಘಡಘಡನೆ ನಡುನಡುಗೆ ಘುಡುಘುಡಿಸಿ ಸಭೆ ಬೆದರೆ ಹಿಡಿಹಿ ಡಿದು ಹಿರಣ್ಯಕನ**

। ನಿ ಸನೀ ದ ದದನಿ ಸರಿ । ,,,,, ,,,,, ।
**ತೊಡೆಯಲ್ಲಿ ಕೆಡಹಿದನ**

**ಮೇಲಿನಂತೆ**

**ಉರದೊಳಪ್ಪಳಿಸಿ ಅರಿ ಶಿರವ ಸರಸರ ಸೀಳಿ**
**ಪರಿಪರಿಯಲಿ ಚರ್ಮ ಎಳೆದೆಳೆದು ಎಲುಬು ನರ**
**ನರವನು ತೆಗೆದು ನಿರ್ಗಳಿತ ಶೋಣಿತ ಸುರಿಯೆ**
**ಹರಿಹರಿದು ಕರುಳ ಕೊರಳೊಳಗೆ ಇಟ್ಟವನ**

। ಮಮಮಮಮ ದಮಮ ಗಗ । ಗಮಮ ಮಗ ಮ ಗಗಗ ಗ ।
**ಪುರ ಜ ನ ರು ಹಾ ಯೆನಲು ಸುರರು ಹೂ ಮಳೆಗರೆಯೆ**

। ಗಮದನಿನಿ ನೀ ನಿ ನೀ । ನಿ ದ ದದಸನೀ,,, ।
**ತರ ತರದ ವಾದ್ಯ ಸಂ ಭ್ರಮಗಳಿಂ ದ**

। ಸಸಸಸ ರಿ ಸಸಸಾ ರಿ । ಸ ರಿಸ ಸರಿ ಸ ಸಸ ಸ ಸ ।
**ಹರಿಹರಿಯೆ ಶರಣೆಂದು ಸ್ತುತಿಸಿ ಶಿಶು ಮೊರೆಯಿಡುವ**

। ನಿಸ ನಿಸ ನಿ ದನಿದಮಗ । ಮಗಗ ಮದಗಮಮಾಗ । ;;;;; । ಗಮದನಿನಿ ನೀನಿನಿ ನಿ । ನೀ ನಿನಿದದಸ ನೀ,, ।
**ಕರುಣಾಳು ಕಾ ಗಿನೆ ಲೆ ಯಾದಿ ಕೇ ಶವ ನ ಕರುಣಾಳು ಕಾಗಿನೆಲೆ ಯಾದಿಕೇ ಶವನ**

# ಕಲಿಯುಗದ ಮಹಿಮೆಯನು

ಕಲಿಯುಗದ ಮಹಿಮೆಯನು ಕಂಡಷ್ಟು ಹೇಳುವೆನು
ಕಮಲನಾಭನ ಕೃಪೆಯ ಪಡೆದವರು ಕೇಳಿ

ಸತ್ಯ ಧರ್ಮಗಳೆಲ್ಲ ಎತ್ತ ಪೋದವೊ ಕಾಣೆ
ಉತ್ತಮರ ಜೀವನಕೆ ದಾರಿಯಿಲ್ಲ
ನಿತ್ಯದಲಿ ಕಳವು ವ್ಯಭಿಚಾರವುಳ್ಳವರೆಲ್ಲ
ಅರ್ಥಸಂಪನ್ನರಾಗಿ ಅನುಭವಿಸುತಿಹರು

ಅತ್ತೆಯೇ ಸೊಸೆಯಾಗಿ ಸೊಸೆಯು ಅತ್ತೆಯಾಗಿ
ಪುತ್ರನೂ ಪಿತನಾಗಿ ಪಿತನೂ ಪುತ್ರನಾಗಿ
ಮತ್ತೆ ಗಂಡನಿಗೆ ಹೆಂಡತಿಯೆ ಗಂಡಳು ಆಗಿ
ವರ್ತಿಸುವರಯ್ಯ ತಗೆದಿರಿಲ್ಲವೆಂದು

ಅನ್ನ ವಸ್ತ್ರಗಳಿಂದ ಚೆನ್ನಾಗಿ ಬಾಳುವರ
ಭಿನ್ನ ತಂತ್ರವ ಮಾಡಿ ಕೆಡಿಸುತಿಹರು
ಗನ್ನ ಗತಕವ ಮಾಳ್ಪ ಗ್ರಾಮೀಣ್ಯಗಳ ಕಲಿತು
ಕುನ್ನಿಗಳು ಹೆಚ್ಚಿದರು ಕ್ರೂರ ಫಣಿಯಂತೆ

ನಡೆವ ಕಾರ್ಯಗಳೆಲ್ಲ ನುಡಿಯಲೆನ್ನಳವಲ್ಲ
ಒಡೆಯ ನೀನೇ ಬಲ್ಲೆ ಕಲಿಯುಗದ ಮಹಿಮೆಯನು
ತಡವ ಮಾಡಲಿ ಬೇಡ ತಾಳಲಾರದು ಶೋಕ
ಮೃಡನ ವೈರಿಯ ಪೆತ್ತ ಆದಿಕೇಶವ

ರಾಗ: ಶಿವರಂಜನಿ ಸ ರಿ² ಗ² ಪ ದ² ಸ ತ್ರಿಶ್ರ ನಡೆ ಆದಿತಾಳ

। ಗಸಸ ಸಸರಿ ಗ ಪಪ ಪ ಪಾ । ಪದದಾಸದ । ದಪಪ ಪಪಾ ।
ಕಲಿಯುಗದ ಮಹಿಮೆಯನು ಕಂ ಡ ಷ್ಟು ಪೇಳುವೆನು
। ಪದ ದದಸದದಪ ಪ ದ ಪಗ । ಪದ ಪಗ ರಿಗ । ಸರಿಸಸಾ,, ।
ಕ ಮಲನಾ ಭನ ಕೃಪೆಯ ಪಡೆದವರು ಕೇ ಳಿ

। ಪಾಪಾ ಪಾದ ಸದಾಪಾ । ಪಾದಸ ದಸ । ಸಸ ಸಾಸಾ ।
ಸ ತ್ಯ ಧ ರ್ಮಗಳೆಲ್ಲ ಎ ತ್ತ ಪೋ ದವೊ ಕಾಣೆ
। ರೀ ರಿ ರಿ ರೀ ರೀ ರಿ ರಿರಿಸ । ಗಾ ರಿಸಾ, । ಸಾ,,,, ।
ಉತ್ತಮರ ಜೀವನಕೆ ದಾರಿಯಿ ಲ್ಲ
। ರೀಗ ಗಗಾ ರಿಗಗಾ ರಿ ಗ । ಗಾಗರಿರಿಸ । ಗ ರಿ ಸಾಸಾ ।
ನಿ ತ್ಯದಲಿ ಕಳವು ವ್ಯಭಿ ಚಾರ ವು ಳ್ಳವರೆ ಲ್ಲ
। ದಸಸ ಸಾ,ದಾಪಪಾಪ । ಪದ ಪಗ ಗಾ । ರಿಗ ಸರಿಸಾ ।
ಅ ರ್ಥ ಸಂ ಪ ನ್ನರಾಗಿ ಅನುಭವಿಸು ತಿಹರು

ಮೇಲಿನಂತೆ

ಅತ್ತೆಯೇ ಸೊಸೆಯಾಗಿ ಸೊಸೆಯು ಅತ್ತೆಯಾಗಿ
ಪುತ್ರನೇ ಪಿತನಾಗಿ ಪಿತನೇ ಪುತ್ರನಾಗಿ
ಮತ್ತೆ ಗಂಡನಿಗೆ ಹೆಂಡತಿಯೆ ಗಂಡಳು ಆಗಿ
ವರ್ತಿಸುವರಯ್ಯ ತಗೆದಿರಿಲ್ಲವೆಂದು

ಅನ್ನ ವಸ್ತ್ರಗಳಿಂದ ಚೆನ್ನಾಗಿ ಬಾಳುವರ
ಭಿನ್ನ ತಂತ್ರವ ಮಾಡಿ ಕೆಡಿಸುತಿಹರು
ಗನ್ನ ಗತಕವ ಮಾಳ್ಪ ಗ್ರಾಮೀಣ್ಯಗಳ ಕಲಿತು
ಕುನ್ನಿಗಳು ಹೆಚ್ಚಿದರು ಕ್ರೂರ ಫಣಿಯಂತೆ

ನಡೆವ ಕಾರ್ಯಗಳೆಲ್ಲ ನುಡಿಯಲೆನ್ನಳವಲ್ಲ
ಒಡೆಯ ನೀನೇ ಬಲ್ಲೆ ಕಲಿಯುಗದ ಮಹಿಮೆ
ತಡವ ಮಾಡಲಿ ಬೇಡ ತಾಳಲಾರದು ಶೋಕ
। ದ ಸಸಾ ದ ಸಸ ಸಾಸಾ । ದಾಸಸಾರಿ । ರಿಗಸರೀ, ॥
ಮೃಡನ ವೈರಿಯ ಪೆತ್ತ ಆ ದಿಕೇಶ ವ
। ದ ಸಸಾ ದ ಸಸ ದಾಪಾ । ದಾಸದಾಪ । ಗರಿಗರಿಸಾ ॥
ಮೃಡನ ವೈರಿಯ ಪೆ ತ್ತ ಆ ದಿಕೇಶ ವ

## ಕಷ್ಟಪಟ್ಟರು ಇಲ್ಲ

ಕಷ್ಟಪಟ್ಟರು ಇಲ್ಲ ಕಳವಳಿಸಿದರು ಇಲ್ಲ
ಭ್ರಷ್ಟ ಮಾನವ ನಿನ್ನ ಹಣೆಬರಹವೆಲ್ಲ

ಸಿರಿವಂತನ ಸ್ನೇಹವ ಮಾಡಿ ಬದುಕಿದರಿಲ್ಲ
ಪರಿಪರಿಯಲಿ ವಿದ್ಯೆಯ ಕಲಿತರೂ ಇಲ್ಲ
ನರಿ ಬುದ್ಧಿಯಿಂದಲಿ ನಡೆದುಕೊಂಡರು ಇಲ್ಲ
ಅರಿಯದೆ ಹಲವ ಹಂಬಲಿಸಿದರು ಇಲ್ಲ

ಕೊಂಡಾಡಿ ಕಾಡಿ ನೀ ಬೇಡಿಕೊಂಡರು ಇಲ್ಲ
ಕಂಡಕಂಡವರಿಗೆ ನೀ ಕೈಮುಗಿದರಿಲ್ಲ
ಗಂಡುಗತ್ತರಿಯನು ಕೊರಳಿಗಿಟ್ಟರು ಇಲ್ಲ–ಪ್ರ
ಚಂಡನಾದರು ಇಲ್ಲ, ಪರಿಹಾಸ್ಯವೆಲ್ಲ

ಕಟ್ಟಾಳು ಕಡುಜಾಣನಾಗಿ ಪುಟ್ಟಿದರಿಲ್ಲ
ಬೆಟ್ಟವನು ಕಿತ್ತು ತಂದಿಟ್ಟರೂ ಇಲ್ಲ
ಸೃಷ್ಟಿಯೊಳು ಕಾಗಿನೆಲೆಯಾದಿಕೇಶವರಾಯ
ಕೊಟ್ಟವರಿಗುಂಟು ಕೊಡದವಗಿಲ್ಲ

**ರಾಗ:ದ್ವಿಜಾವಂತಿ** ಸ ರಿ ಗ ಮ ಪ ನಿ ದ ನಿ ಸ ಸ ನಿ ಪ ಮ ಗ ಮ ರಿ **ಗ** ರಿ ಸ **ಖಂಡ ಛಾಪು**

। ,,,ರೀಗ ಗಮದಪ । ಮಗಮಗ ರಿ**ಗ**ರಿ । ,,**ಗ**ರೀನಿಪಾದಾ । ಮಗಮಗ ರಿ**ಗ**ರಿ ।
**ಕ ಷ್ಟಪ ಟ್ಟ ರು ಇ ಲ್ಲ ಕಳ ವಳಿ ಸಿ ದ ರು ಇ ಲ್ಲ**

। ,,,ನಿದಪ ಪಸಾ,, । ನಿದಸನಿ ನಿದಪಾಪಾ । ,,ರಿಗಾಮಪಾದಾ । ಮಗಪಮಮಗರಿ**ಗ**ರೀ ।
**ಭ್ರಷ್ಟ ಮಾ ನ ವ ನಿ ನ್ನ ಹಣೆಬ ರ ಹ ವೆ ಲ್ಲ**

। ,,ಸಸಾಸಾ,ಸಾ । ಸಾ ಸಾ ಸ । ,,,ನಿದ ನಿ ನಿದದಪ । ಗರಿರೀರಿರೀ।
**ಸಿರಿ ವಂತ ನ ಸ್ನೇಹ ಮಾಡಿ ಬ ದು ಕಿ ದ ರಿಲ್ಲ**

। ,,ರಿಗಾಮಮಾಮಾ । ಮಾಗಪಮಗ ರಿಗರಿ । ,,ನಿಸಾನಿದಾಪಾ । ಸಾಸಾ, ।
**ಪರಿ ಪ ರಿ ಯ ಲಿ ವಿ ದ್ಯೆ ಕಲಿ ತರೂ ಇಲ್ಲ**

। ,,ದಪಾಸಾ,ಸಾ । ನಿದಸನಿನಿದದಪಪಾ । ,,ರಿಗಾಮಪಾದಾ । ಮಗಪಮಮಗಗರಿರೀ ।
**ನರಿ ಬುದ್ಧಿ ಯಿಂ ದ ಲಿ ಪೂ ಜಿ ಸ ಲು ಸಿ ಗ ಲಿ ಲ್ಲ**

। ,,ರಿಗಾಮಪದನಿದ । ಮಗಪಮಮಗಗರಿರೀ । ,,ಸ**ಗಾ**ರಿನೀಪಾ । ಸಸ ಸಾಸ ।
**ಅರಿಯದೆ ಹ ಲು ಬಿ ನೀ ಹಂ ಬಲಿಸಿ ದರು ಇಲ್ಲ**

। ,,ಗಮ ಪಾ,,ದಾ । ಗಪಪಾದಪ ಮಗರಿಗ । ರೀರಿಗಾಮಪದನಿದ । ಗಪದಪ ಮಗರಿ**ಗ**ರೀ ।
**ಕೊಂಡಾ ಡಿ ಕಾ ಡಿ ನೀ ಬೇ ಡಿ ಕೊಂ ಡ ರು ಇ ಲ್ಲ**

। ,,ರೀಗಾ ಮಾಪಾ । ಮಾಗಪಮಗರಿ**ಗ**ರಿ । ,,ಸರೀ ನಿ ದಾಪಾ । ಸಾಸಾ, ।
**ಕಂಡ ಕಂ ಡ ದೇ ವರಿಗೆ ಕೈ ಮುಗಿ ದ ರಿ ಲ್ಲ**

। ,,,ದಾ ಪ ಪಸಾ । ನಿದಸನಿನಿದದಪಪಾ । ,,ದ ಪಾಪ**ಗ**ರೀ, । **ಗ** ರಿ ರೀರಿ ।
**ಗಂಡುಗ ತ್ತ ರಿ ಯ ನ್ನು ಕೊರ ಳಿಗಿ ಟ್ಟರು ಇ ಲ್ಲ**

। ,,ಸಾಸಾ,,ರೀ । ನಿದಸನಿನಿದದಪಪಾ । ,,ರಿಗಾಮಪಾದಾ । ಮಾಗಪಮಗರಿಮ**ಗಾ**ರೀ ।
**ಪ್ರಚಂಡ ನಾ ದರಿ ಲ್ಲ ಪರಿ ಹಾ ಸ್ಯ ವೆ ಲ್ಲ**

। ,,ರಿಸಸಾ,,ಸಾ । ,,ಸಸಾ ಪಸಾಸಾ । ನಿದಸನಿನಿದ ಪಾ । ರಿ ರಿರೀರಿ ।
**ಕ ಟ್ಟಾಳು ಕಡುಜಾ ಣ ನಾ ಗಿ ಪು ಟ್ಟಿದರಿಲ್ಲ**

। ,ರಿಗಮಮ । ಮಾಗಪಮಗರಿ**ಗ**ರಿ । ,,ದನೀದಪಾಪಾ । ಪಸಾ, ಸಾಸ ।
**ಬೆಟ್ಟವನು ಕಿ ತ್ತು ತಂ ದಿ ಟ್ಟ ರೂ ಇಲ್ಲ**

। ,,ದಪಪಾಸಾಸಾ । ಸಾರಿದನಿನೀಸನಿ । ನೀದಸನಿದಪಪದ । ಗಪಮಾಗಪಮಗರೀ ।
**ಸೃಷ್ಟಿಯೊಳು ಕಾಗಿನೆ ಲೆ ಯಾ ದಿಕೇ ಶವರಾ ಯ**

। ,,ರೀ ಗಾಮಾಪದ । ಮಗಪಮಮಗರಿ**ಗ**ರೀ । ,,**ಗ** ರೀನಿದಾಪಾ । ಸಾಸಾ, ।
**ಕೊಟ್ಟವ ರಿ ಗುಂ ಟು ಕೊಡ ದವ ಗೆ ಇ ಲ್ಲ**

## ಕುಲ ಕುಲ ಕುಲವೆಂದು

ಕುಲ ಕುಲ ಕುಲವೆಂದು ಹೊಡೆದಾಡದಿರಿ ನಿಮ್ಮ
ಕುಲದ ನೆಲೆಯ ನೇನಾದರು ಬಲ್ಲಿರ

ಹುಟ್ಟದ ಯೋನಿಗಳಿಲ್ಲ ಮೆಟ್ಟದ ಭೂಮಿಗಳಿಲ್ಲ
ಅಟ್ಟು ಉಣ್ಣದ ವಸ್ತುಗಳಿಲ್ಲ
ಗುಟ್ಟು ಕಾಣಿಸ ಬಂತು ಹಿರಿದೇನು ಕಿರಿದೇನು
ನೆಟ್ಟನೆ ಸರ್ವಜ್ಞನ ನೆನೆ ಕಂಡ್ಯಾ ಮನುಜ

ಜಲವೆ ಸಕಲ ಕುಲಕೆ ತಾಯಲ್ಲವೆ
ಜಲವ ಕುಲವನೇನಾದರು ಬಲ್ಲಿರ
ಜಲದ ಬೊಬ್ಬುಳಿಯಂತೆ ಸ್ಥಿರವಲ್ಲವೀ ದೇಹ
ನೆಲೆಯ ಅರಿತು ನೀ ನೆಲೆ ಕಂಡ್ಯಾ ಮನುಜ

ಹರಿಯೆ ಸರ್ವೋತ್ತಮ ಹರಿಯೆ ಸರ್ವೇಶ್ವರ
ಹರಿಮಯವೆಲ್ಲವೆನುತ ತಿಳಿದು
ಸಿರಿ ಕಾಗಿನೆಲೆಯಾದಿ ಕೇಶವರಾಯನ
ಚರಣ ಕಮಲವ ಕೀರ್ತಿಸುವನೆ ಕುಲಜ

## ಬಂದೇವಯ್ಯ ಗೋವಿಂದಶೆಟ್ಟಿ

ಬಂದೇವಯ್ಯ ಗೋವಿಂದಶೆಟ್ಟಿ–ನಿಮ್ಮ
ಹರಿವಾಣ ತೀರ್ಥಪ್ರಸಾದ ಉಂಟೆನಲಾಗಿ

ಅಪ್ಪವು ಅತಿರಸ ತುಪ್ಪವು ಚಿನಿಪಾಲು
ಒಪ್ಪುವ ಸಕ್ಕರೆ ಯಾಲಕ್ಕಿಯು
ಅಪರೂಪವಾದ ಕಜ್ಜಾಯಗಳೆಲ್ಲ
ಛಪ್ಪನ್ನ ದೇಶಕ್ಕೆ ಮಾರುವ ಶೆಟ್ಟಿ

ಒಡೆದ ಮಡಕೆ ತಂದು ಇಡಿದು ನಾಮವ ಮಾಡಿ
ಕೊಡುವೆ ನೀ ಕಾಸಿಗೆ ಒಂದೊಂದನು
ಒಡಲು ತುಂಬಿ ಮಿಕ್ಕ ಅನ್ನವ ಮಾರಿಸಿ
ಒಡವೆಯ ಗಳಿಸುವ ಕಡುಲೋಭಿ ಶೆಟ್ಟಿ

ಶೇಷಗಿರಿಯಲಿ ವಾಸಮಾಡಿಕೊಂಡು
ದೇಶದೇಶಕೆ ಹೆಸರಾದ ಶೆಟ್ಟಿ
ಕಾಸುಕಾಸಿಗೆ ಬಡ್ಡಿ ಗಳಿಸಿಕೊಂಬ ಆದಿ
ಕೇಶವ ನಾರಾಯಣ ತಿಮ್ಮ ಶೆಟ್ಟಿ

**ರಾಗ: ಕಾಮವರ್ಧಿನಿ** **ಸ ರಿ೧ ಗ೩ ಮ೨ ಪ ದ೧ ನಿ೩ ಸ** **ಆದಿತಾಳ**

। ,,ಸರಿಗಾ,, । ಗಮದಾಮಾಗಾ । ಮಗಗಾರೀಸಾ । ಸಾಸಾ ರಿಸನೀ ।
**ಬಂದೇ ವ ಯ್ಯ ಗೋವಿಂ ದ ಶೆ ಟ್ಟಿ ನಿ ಮ್ಮ**
। ,,ಸ ರಿಗಾ ರೀ । ಗಾ,,ಗಾ ಗಾ । ಗಮಪಾಪಮ ಗಾ । ಪಮಗರಿಗಾಗಾ ।
**ಹರಿವಾಣ ತೀ ರ್ಥ ಪ್ರ ಸಾ ದ ಉಂ ಟಿ ರ ಲಾಗಿ**

। ,,ಮಾಪಾಪಾ । ಪಾಪಾಪಾಪಾ । ,,ಗಾಮಾಗಾ । ರೀರೀಸಾ ಸಾ ।
**ಅ ಪ್ಪವು ಅ ತಿ ರ ಸ ತುಪ್ಪ ವು ಚಿ ನಿ ಹಾಲು**
। ,,ಸಾರೀ ನೀ । ಸಾಮಗಗಾಗಾ । ,,ಮಪಪಾಪಾ । ಪಾ,, ,,,, ।
**ಒಪ್ಪುವ ಸ ಕ್ಕ ರೆ ಯಾ ಲ ಕ್ಕಿ ಯು**
। ,,ಮಗಮಾದಾ । ನೀ,,ನೀದಾ । ,,ನಿಸಸಾ ಸಾ । ಸನಿಗರಿಸಾಸಾ ।
**ಅ ಪರೂಪ ವಾ ದ ಕ ಜ್ಜಾಯ ಗ ಳ ನೆ ಲ್ಲ**
। ,,ಸಾಸಾಸಾ । ಸಾನಿರಿಸನಿದಾಪಾ । ,,ಮಾಪಾದಾ । ಮಾಗಾಮಾಗಾ ।
**ಛಪ್ಪನ್ನ ದೇ ಶ ಕ್ಕೆ ಮಾರುವ ಶೆ ಟ್ಟಿ**

। ,,ಗಮಪಾ ಪಾ । ಮಾಮಾ ಪಾಪಾ । ಮಾಪಾಮಾ ಗಾ । ಮಾರೀ ಗಾ ಗಾ ।
**ಒಡೆದ ಮ ಡ ಕೆ ತಂದು ಅ ರೆ ದು ನಾ ಮ ವ ಮಾಡಿ**
। ,,ಸ ಗ ಗಾ ಗಾ । ಗಾಮದಮಾಗಾ । ಮಾ,ಗಾ, ರೀ । ಸಾ,,,,,, ।
**ಕೊಡುವೆ ನೀ ಕಾ ಸಿ ಗೆ ಒಂ ದೊಂದ ನು**
। ಗಾಗಾಮಾ ದಾ । ,,ನೀ ನೀದಾ । ದಾಸಾಸಾಸಾ । ನೀರೀಸಾಸಾ ।
**ಒ ಡಲು ತುಂ ಬಿ ಮಿಕ್ಕ ಅ ನ್ನವ ಮಾ ರಿ ಸಿ**
। ,,ನಿ ಸ ಸಾಸಾ । ನೀಸನಿದಾಪಮ । ,,ಮಪ ಮಾ ಗಾ । ಮಾಗಾಗಮಗಮ । ಸಾ
**ಒಡವೆಯ ಗ ಳಿ ಸುವ ಕ ಡುಲೋಭಿ ಶೆ ಟ್ಟಿ**

। ದಾಸಾನೀದಾ । ಪಾ,,ಪಾಪಾ । ಪಾ,,ಮಾಗಾ । ಮಾರೀ ಗಾಗಾ ।
**ಶೇ ಷಗಿ ರಿ ಯಲಿ ವಾ ಸ ವಾ ಗಿ ಹ ಶೆ ಟ್ಟಿ**
। ,,ಗಾಗಾಗಾ । ಮಾದಾಮಾಗಾ । ,,ರಿ ಗರೀಸಾ । ಸಾ,,ಸಾ,, ।
**ದೇಶದೇ ಶ ದೊಳ್ ಹೆಸರಾದ ಶೆ ಟ್ಟಿ**
। ಮಾಗಾಮಾದಾ । ,,ನೀನೀದಾ । ,,ದಾಸಾ ಸಾ । ನೀರೀಸಾ ಸಾ ।
**ಕಾ ಸು ಕಾ ಸಿ ಗೆ ಬ ಡ್ಡಿ ಗ ಳಿ ಸಿ ಕೊಂಬ**
। ,,ಸಾಸಾಸಾ । ಸಾಸಾ ಸಾಸಾ । ನೀಸಾ ದಾಪಾ । ಮಾಗಾಮಾಗಾ ।
**ಆದಿ ಕೇ ಶ ವ ನಾರಾ ಯಣ ತಿ ಮ್ಮ ಶೆ ಟ್ಟಿ**

## ಬದುಕಿದೆನು ಬದುಕಿದೆನು

ಬದುಕಿದೆನು ಬದುಕಿದೆನು ಭವ ಎನಗೆ ಹಿಂಗಿತು
ಪದುಮನಾಭನ ಪಾದದೊಲಿಮೆ ಎನಗಾಯಿತು

ಹರಿತೀರ್ಥ ಪ್ರಸಾದ ಎನ್ನ ಜಿಹ್ವೆಗೊದಗಿತು
ಹರಿಯ ನಾಮಾಮೃತವು ಕಿವಿಗೊದಗಿತು
ಹರಿಯ ದಾಸರು ಎನ್ನ ಬಂಧು ಬಳಗವಾದರು
ಹರಿಯ ಶ್ರೀಮುದ್ರೆ ಎನಗಾಭರಣವಾಯಿತು

ಮುಕುತರಾದರು ಎನ್ನ ನೂರೊಂದು ಕುಲದವರು
ಮುಕುತಿ ಮಾರ್ಗಕೆ ಯೊಗ್ಯ ನಾನಾದೆನೊ
ಅಕಳಂಕ ಶ್ರೀಹರಿ ಭಕುತಿಗೆನ್ನ ಮನ ಬೆಳೆದು
ರುಕುಮಿಣಿಯರಸ ಕೈವಶನಾದನೆನಗೆ

ಇಂದೆನ್ನ ಜೀವಕ್ಕು ಸಕಲ ಸಂಪದವಾಯ್ತು
ಮುಂದೆನ್ನ ಜನ್ಮ ಸಾಫಲ್ಯವಾಯ್ತು
ತಂದೆ ಶ್ರೀಕಾಗಿನೆಲೆ ಆದಿಕೇಶವರಾಯ
ಬಂದೆನ್ನ ಹೃದಯದಲಿ ನೆಲೆಯಾಗಿ ನಿಂತ

ರಾಗ:ನಠಭೈರವಿ ಸ ರಿ² ಗ² ಮ¹ ಪ ದ¹ ನಿ² ಸ ಖಂಡ ಛಾಪು

। ,,ಗಗಾ,ಮಗಾರಿಸಸಾ । ಮಗಮಗಮಗಗರಿಸಾ । ,,ಸ ಸರಿ ನಿಸಪನೀ । ಗರಿಸರಿಗರಿಗಾ,, ।
ಬದು ಕಿದೆನು ಬ ದು ಕಿ ದೆ ನು ಭವ ಎ ನಗೆ ಹಿಂ ಗಿ ತು

। ,,ಗಪಾದ ಸಾರಿಗರಿಮಗಾ । ಸಾಸನಿ ಸಾನಿರಿಸನಿಪಾ । ಗಾ ಮಾಗಾ, ಗಪಾ । ದಾನಿದಪಾದಪಮಾಪಮರಿಸನಿಸ । ರಿ
ಪದುಮನಾ ಭನ ಪಾ ದ ದೊಲಿ ಮೆ ಎನ ಗಾ ಯಿ ತು

। ,,ದದ ಮಾಪಮಗಾಮಗಸಾ । ,,ಗ ಮಾಪಾ ಗಾ । ಮದದಾ ಸಾ ಸಾರೀ । ಸಾ,ನಿದನಿನೀಸನಿದಾ ।
ಹರಿ ತೀ ರ್ಥ ಪ್ರಸಾ ದ ಜಿ ಹ್ವೆ ಗೆ ದೊರೆ ಕಿ ತು

। ,,ಗ ಮಾಗ ದಾಸಾ । ಸಾ,,ಸಾ ಸಾಸಾ । ,,ಸಗಾನಿ ಸನಿದನಿ । ನಿಗಸಾಗಸನಿಸಾ,,,,, ।
ಹರಿ ಯ ನಾ ಮಾಮೃತ ವು ಕಿವಿ ಗೊದ ಗಿ ತು

। ,,ದದಾನಿ ಸರಿಮಗ । ಗಾಗಾ ಗಾ,,ಗಾ । ,,ರೀಗರಿಸಾರಿಸನಿದಪನಿ । ಸರಿಮಗರಿಗಸರೀ, ।
ಹರಿ ಯ ದಾ ಸ ರು ಎ ನ್ನ ಬಂ ಧು ಗ ಳಾದ ರು

। ,,ನಿನೀನಿ ಸಾರಿಗರಿಮಗಾ । ,,ಸಾ ಸಾ, ಸರೀ । ಸಾನಿರಿಸನಿಪಪಮಾಗಾ । ಮಾಪಮಗಾಮಗರೀಗರಿಸಾರಿಸನಿಸ । ರೀ
ಹರಿ ಯ ಶ್ರೀ ಮುದ್ರೆ ಎನ ಗಾ ಭರ ಣ ವಾ ಯಿ ತು

ಮೊದಲಿನ ಚರಣದಂತೆ ಮುಂದಿನ ಚರಣವನ್ನೂ ಹಾಡಬಹುದು

ಮುಕುತರಾದರು ಎನ್ನ ನೂರೊಂದು ಕುಲದವರು
ಮುಕುತಿ ಮಾರ್ಗಕೆ ಯೊಗ್ಯ ನಾನಾದೆನೊ
ಅಕಳಂಕ ಶ್ರೀಹರಿ ಭಕುತಿಗೆನ್ನ ಮನ ಬೆಳೆದು
ರುಕುಮಿಣಿಯರಸ ಕೈವಶನಾದನೆನಗೆ

। ,,ದಾ ಮಾಪಾಗಾಮಗಸಾ । ಗಮನಿದದಾದಾ,, । ,,ಮಗಾಮದನಿಸಾ,, । ಸನಿಸಾನಿದನೀಸನಿದಾ ।
ಇಂದೆ ನ್ನ ಜೀ ವ ಕೆ ಸ ಕ ಲ ಸಂ ಪ ದ ವಾ ಯ್ತು

। ,,ಗಮ ದನಿಸಾಸಾ । ನಿಸಾ,ಸಾ,,ಸಾ । ಸಾ,,ಗಾಸನಿದನಿ । ನಿಗಸಾಗಸನಿಸಾ,,, ।
ಮುಂದೆ ನ್ನ ಜ ನ್ಮ ಸಾ ಫ ಲ್ಯವಾ ಯ್ತು

। ,,,ದಾನಿ ಸರಿಗಾ । ಗಾ,,ಗಾಗಾಗಾ । ,,,ರಿಗರಿಸರಿನಿಸ । ಪಾನೀಸರಿಗಾರೀ ।
ತಂದೆ ಶ್ರೀ ಕಾ ಗಿ ನೆ ಲೆ ಆ ದಿಕೇ ಶ ವ ರಾ ಯ

। ,,ನೀ ಸರಿಗಾರಿಮಗಾ, । ರೀ ಸಾಸಾ ಸಾಸಾ । ,,ಸ ರಿ ನಿ ಸಾಪಾ । ಮಾಗಪಮಗರೀಗರಿಸಾರಿಸನಿಸ । ರೀ
ಬಂದೆ ನ್ನ ಹೃದ ಯದ ಲಿ ನೆಲೆಯಾಗಿ ನಿಂ ತ

## ಬಾಗಿಲನು ತೆರೆದು ಸೇವೆಯನು ಕೊಡೊ ಹರಿಯೆ

ಬಾಗಿಲನು ತೆರೆದು ಸೇವೆಯನು ಕೊಡೊ ಹರಿಯೆ
ಕೂಗಿದರು ಧ್ವನಿ ಕೇಳಲಿಲ್ಲವೆ ನರಹರಿಯೆ

ಪರಮ ಪದದೊಳಗೆ ವಿಷಧರನ ತಲ್ಪದಲಿ
ಸಿರಿ ಸಹಿತ ಕ್ಷೀರವಾರಿಧಿಯೊಳಿರಲು
ಕರಿರಾಜ ಕಷ್ಟದಲಿ ಆದಿಮೂಲ ಎಂದು
ಕರೆಯಲಾಕ್ಷಣ ಬಂದು ಒದಗಿದೆಯೆ ನರಹರಿಯೆ

ಕಡುಕೋಪದಿಂ ಖಳನು ಖಡುಗವನು ಪಿಡಿದು–ನಿ
ನ್ನೊಡೆಯನೆಲ್ಲಿಹನು ಎಂದು ನುಡಿಯೆ
ದೃಢ ಭಕುತಿಯಲಿ ಶಿಶುವು ಬಿಡದೆ ನಿನ್ನನು ಭಜಿಸೆ
ಸಡಗರದಿ ಸ್ಥಂಭದಿಂದೊಡೆದೆ ನರಹರಿಯೆ

ಯಮಸುತನ ರಾಣಿಗಕ್ಷಯವಸನವನ್ನಿತ್ತೆ
ಸಮಯದಲಿ ಅಜಮಿಳನ ಪೊರೆದೆ
ಸಮಯಾಸಮಯವುಂಟೆ ಭಕ್ತವತ್ಸಲ ನಿನಗೆ
ಕಮಲಾಕ್ಷ ಕಾಗಿನೆಲೆಯಾದಿ ಕೇಶವನೆ

**ರಾಗ: ಆಭೇರಿ** ಸ ಗ೨ ಮ೧ ಪ ನಿ೨ ಸ ಸ ನಿ೨ ದ೨ ಪ ಮ೨ ಗ೨ ರಿ೨ ಸ **ಅನ್ಯ ಸ್ವರ ಮ೨** **ಖಂಡ ಛಾಪು**

। ಪಾ,,ಪಾಮಾಮಾ । ಪಾಪಾಪಾ,, ,,,, । ಪಾ,,ನಿಪಮಾಮಗ । ಮಾಪಾ ಗಾಮಾಪಮಗಾ ।
**ಬಾ ಗಿ ಲ ನು ತೆ ರೆ ದು ಸೇ ವೆ ಯ ನು ಕೊಡೊ ಹ ರಿ ಯೆ**

। ,,ಪನೀಸಗಾಗಾ । ,,ಗ ಮಾ ಪಸಾಸಾ । ನಿಪಾ,ನಿಪಮಗಮಾಪಮ । ಗಾ ನಿಸಾಗಮಾಪಾ । ನಿನಿಪಮಪಾಗಾಮಗ ।
**ಕೂ ಗಿದ ರು ಧ್ವನಿ ಕೇ ಳ ಲಿ ಲ್ಲ ವೆ ನರ ಹರಿ ಯೆ**

। ,,ದಪಾದಪಾಮ ಗರಿಸಾ । ಗಾ ಗಾಗಾ,ಗರೀ । ಮಗಮಗರಿಸ ರೀಸಸನಿಸ । ನಿಸಸಾಸಾ ಪನಿನೀಸನಿ ।
**ಪ ರ ಮ ಪ ದ ದೊಳ ಗೆ ವಿಷ ಧ ರ ನ ತ ಲ್ಪ ದ ಲಿ ನೀ**

। ಪಾ ಪನೀ ಸಗಾಗಾ । ,,ನೀ,ಸಗಾ,, । **ಮಾಮಾಮಾ**ಪಾನೀಸನಿ । ಪಾ,ಮಗಪಮನಿಪಾ ।
**ಸಿ ರಿ ಸಹಿ ತ ಕ್ಷೀರವಾ ರಿ ಧಿ ಯೊಳಿರ ಲು**

। ,,ಗಮಾಪಾನೀನೀ । ಪನೀ,ನೀನೀನೀ । ,,ನಿಪಾನಿನಿಸಾ,, । ಸಾ,, ಸಾ,,ಸಾ । ;;;;; ।
**ಕರಿ ರಾ ಜ ಕ ಷ್ಟದ ಲಿ ಆ ದಿಮೂ ಲ ಎಂ ದು**

। ,,ನಿನೀನಿ ನೀಸನಿ । ನೀಪಾ ಮಪಾ,ಪಾ । ,,ಮಪಾಮಪಾಗರಿ । ಸಾ ನಿಸಾಗಮಾಪಾ ।
**ಕರೆ ಯಲಾ ಕ್ಷಣ ಬಂ ದು ಒ ದ ಗಿ ದೆ ಯೊ ನರ ಹರಿ ಯೆ**

। ,,ಗಾಮಾನಿನಿಪಮ । ಗಸಾ, ಗಾಗಾಗಾ । ,,ಗ ಮಾಗಸಾರೀ । ನೀಸಾಪನಿನೀಸನಿಪಾ ।
**ಕ ಡು ಕೋ ಪ ದಿಂ ಖಳ ನು ಖಡು ಗವ ನು ಪಿ ಡಿದು**

। ,,ಪನೀಸ ಗಾಗಾ । ,,ನಿಸಾಗ **ಮಾಮಾ** । ಪಾ,,**ಮಾ** ಪನಿನೀಸನಿ । ಪಾ,ಮಗಪಮನಿಪಾ ।
**ನಿ ನ್ನೊಡೆ ಯ ಎ ಲ್ಲಿಹ ನು ಎಂ ದು ನು ಡಿ ಯೆ**

। ,,ಗ ಮಾ ಪನೀನೀ । ನೀನೀ ದನಿನೀನೀ । ,,ನಿಪಾನಿ ನಿಸಾ, । ಸಾಸಾ ನಿಸಸಾಸಾ । ;;;;; ।
**ದೃಢ ಭಕುತಿ ಯಲಿ ಶಿ ಶುವು ಬಿಡದೆ ನಿ ನ್ನನು ಭ ಜಿಸೆ**

। ,,ಸನೀಸನೀಪಾ । ಪಾ,,ಪಾಪಾ,, । ಮಾ ಪಾಮಗಮಾಪಮಗರಿ । ಸಾ ನಿಸಾಗಮಾಪನಿ ।
**ಸಡಗರ ದಿ ಸ್ಥಂ ಭ ದಿಂ ದೊಡೆ ದೆ ನರ ಹರಿ ಯೆ**

**ಮೊದಲನೆಯ ಚರಣದಂತೆ**

**ಯಮಸುತನ ರಾಣಿಗಕ್ಷಯವಸನವನ್ನಿತ್ತೆ**
**ಸಮಯದಲಿ ಅಜಮಿಳನ ಪೊರೆದೆ**
**ಸಮಯಾಸಮಯವುಂಟೆ ಭಕ್ತವತ್ಸಲ ನಿನಗೆ**
**ಕಮಲಾಕ್ಷ ಕಾಗಿನೆಲೆಯಾದಿ ಕೇಶವನೆ**

# ಬಾಯಿ ನಾರಿದ ಮೇಲೆ

ಬಾಯಿ ನಾರಿದ ಮೇಲೆ ಏಕಾಂತವೆ
ತಾಯಿ ತೀರಿದ ಮೇಲೆ ತವರಾಸೆಯೆ

ಕಣ್ಣು ಕೆಟ್ಟಾಮೇಲೆ ಕಡುರೂಪ ಚೆಲ್ವಿಕೆಯೆ
ಬಣ್ಣ ಗುಂದಿದ ಮೇಲೆ ಬಹುಮಾನವೆ
ಪುಣ್ಯತೀರಿದ ಮೇಲೆ ಪರಲೋಕ ಸಾಧನವೆ
ಸುಣ್ಣವಿಲ್ಲದ ವೀಳ್ಯ ಸಾರಸಮವೆ

ಕಿಲುಬಿನಾ ಬಟ್ಟಲೊಳು ಹುಳಿ ಕಲಸಿ ಉಣಬಹುದೆ
ಚಳಿಜ್ವರಕೆ ಚಂದನದ ಲೇಪವಹುದೆ
ಪೃಥ್ವಿಯೊಳು ಕಾಗಿನೆಲೆ ಆದಿಕೇಶವ ನಿನ್ನ
ಭಕ್ತಿ ಇಲ್ಲದಜನಕೆ ಮುಕ್ತಿಯುಂಟೆ

ರಾಗ: ದರಾರ್ದರಿ ಸ ರಿ ಗ ಪ ದ ನಿ ಸ ಖಂಡ ಛಾಪು

। ,,,ಗಾ ಪ ದಸನೀ । ದದಪಾ ಪಾ,,ದಪ । ಗಾ ಸಗರೀ,,ಸನಿ । ಸಾ;;; ।
ಬಾಯಿ ನಾ ರಿ ದ ಮೇಲೆ ಏ ಕಾಂತ ವೆ
। ,,ರಿಗಗಾಮಗರಿಸ ಸಾ । ರೀಗರಿಸನಿ ಸಾ,,ಸಾ । ,,ಗಪನೀ,,ನೀ । ಸಾ,,ನಿಸದನಿಪದ । ಗಾ
ತಾಯಿ ತೀ ರಿ ದ ಮೇಲೆ ತವರಾ ಸೆ ಯೆ

। ,,,ಗಾಪಾ, ಪಾ । ನೀ,,ಸಾ,,ಸಾ । ,,ಸರೀರಿಗಾಸಾ । ರೀನೀಸಾಸಾಸಾ ।
ಕ ಣ್ಣು ಕೆ ಟ್ಟಾ ಮೇಲೆ ಕಡುರೂಪ ಚೆಲು ವಿ ಕೆ ಯೆ
। ,,ನೀನಿ ನೀ,, । ಸದದಪ ಪಾ,,ದಪ । ಗಾಗಪ ನೀ,,ನೀ । ಸಾ;;; ।
ಬಣ್ಣ ಗುಂ ದಿ ದ ಮೇಲೆ ಬಹುಮಾನ ವೆ
। ,,,ಪಾನಿ ಸರಿಗಾ । ಗಾಗಾ ಗಾ,,ಮಗ । ರಿಸಗಮಾರೀ, ನೀ । ಸಾ,,ಸಾಸಾರಿಸ ।
ಪು ಣ್ಯ ತೀ ರಿ ದ ಮೇಲೆ ಪರ ಲೋಕ ಸಾ ಧ ನ ವೆ
। ನೀ ನೀ,ನಿ ನೀ,, । ನೀಸದ ದಪಪಾದಪ । ಪಗಾಗಾಪನೀನೀ । ಸಾ,,ನಿಸದನಿಪದ । ಗಾ
ಸು ಣ್ಣ ವಿ ಲ್ಲದ ವೀ ಳ್ಯ ಸಾರಸಮ ವೆ

ಮೇಲಿನಂತೆ ಮುಂದಿನ ಚರಣ

ಕಿಲುಬಿನಾ ಬಟ್ಟಲೊಳು ಹುಳಿ ಕಲಸಿ ಉಣಬಹುದೆ
ಚಳಿಜ್ವರಕೆ ಚಂದನದ ಲೇಪವಹುದೆ
ಪೃಥ್ವಿಯೊಳು ಕಾಗಿನೆಲೆ ಆದಿಕೇಶವ ನಿನ್ನ
ಭಕ್ತಿ ಇಲ್ಲದಜನಕೆ ಮುಕ್ತಿಯುಂಟೆ

## ಭಂಟನಾಗಿ ಬಾಗಿಲ ಕಾಯ್ವೆ ಹರಿಯೆ

ಹರಿ ಎಂಜಲ ಹರಿವಾಣಗಳ ಬೆಳಗುವೆ
ಕಂಜನಾಭನ ಪಾದಕಮಲವ ತೊಳೆಯುವೆ
ರಂಜಿಪ ಕುಸುಮದ ಮಾಲೆ ತಂದಿಡುವೆ
ತೊಟ್ಟು ತೊಂಡನಾಗಿ ಬಾಗಿಲ ಕಾಯುವೆ
ಶ್ರೀಕೃಷ್ಣನ ದಾಸರ ದಾಸರ ಮನೆಯ

ಭಂಟನಾಗಿ ಬಾಗಿಲ ಕಾಯ್ವೆ ಹರಿಯೆ
ವೈಕುಂಠನ ದಾಸರ ದಾಸರ ಮನೆಯ

ಹೊರಸುತ್ತು ಪ್ರಾಕಾರವ ಸುತ್ತಿ ನಾ ಬರುವೆ
ಬರುವ ಹೋಗುವರ ವಿಚಾರಿಸಿ ಬಿಡುವೆ
ಕರದಿ ಕಂಬಿಯ ಪೊತ್ತು ಅಲ್ಲಿ ನಿಂತಿರುವೆ
ಹರಿಯ ಸಮ್ಮುಖದ ಓಲಗದೊಳಿರುವೆ

ಮೀಸಲೂಳಿಗವ ನಾ ಮಾಡಿಕೊಂಡಿರುವೆ
ಶೇಷ ಪ್ರಸಾದ ಉಂಡುಕೊಂಡಿರುವೆ
ಶೇಷಾಚಲ ನಮ್ಮ ನೆಲೆಯಾದಿಕೇಶವನ
ದಾಸರ ದಾಸರ ದಾಸರ ಮನೆಗೆ

ರಾಗ:ಕಮಲಪ್ರಭ ಸ ರಿ ಗ ಮ ದ ನಿ ಸ ಆದಿತಾಳ

। ರಿಸ ಸಾ ರಿಸ ರಿಸಸಾ ರಿ ಸಸ ರಿ ಸಸ ಸಾ,ರಿಸನಿದದಾ,, ।
**ಹರಿ ಎಂಜಲ ಹರಿವಾಣಗಳ ಬೆಳಗುವೆ**

। ದಾನಿರೀ,,ರೀರೀ ಗರೀಗ ಗರಿಗರಿಗರಿಗರಿ ರಿ ಗಾರಿ ಸಾ,,,,ರಿಗರಿಗರಿಸಸಾನಿ ದಾಸಾನಿದಾ,, ।
**ಕಂಜನಾ ಭನ ಪಾ ದ ಕ ಮಲ ವ ತೊಳೆ ಯುವೆ**

। ಗರೀರಿರೀ ಗರಿಗರಿಗರಿಗರೀ, ಗಾರಿರಿಸರಿಗರಿಸಾ ನೀ,,ಸರಿ ಸಾ,, ।
**ರಂ ಜಿಪ ಕು ಸು ಮದ ಮಾ ಲೆ ತಂ ದಿಡುವೆ**

। ನೀ,ಸಾ, ನೀ ಸಸಾ,,ಸಾ ನೀಸಸಾ ನೀಸಸಾ ದಸನಿರಿಸನಿದಾ ।
**ತೊಟ್ಟು ತೊಂಡನಾ ಗಿ ಬಾಗಿಲ ಕಾ ಯುವೆ**

। ನೀ,ನೀ,ನಿ ನೀ ದಸನಿಸನಿದದಾ ಮದನಿಸಾಸನಿದಾ ದನಿಸಗಾರಿಗಾರಿಸಸಾ ದನಿಸನಿದಾ ಗಮದಾಮಗರೀ
**ಶ್ರೀಕೃಷ್ಣನ ದಾ ಸ ರ ದಾ ಸ ರ ದಾ ಸ ರಾ ದಾ ಸ ರಾ ಮ ನೆ ಯ**

। ,,,ರೀ ಗರೀ । ,,ಸಾ,, ನಿದ । ನಿಸಾ ರೀ,ಗಾ । ಮಾ ದಮಗರಿಸನಿ । ಸಾ,
**ಭಂಟನಾ ಗಿ ಬಾ ಗಿಲ ಕಾ ಯು ವೆ ಹ ರಿ ಯೆ**

। ಸಾ, ಪಾಪಾ ದ । ಪಾ, ಪಾ,ದಾ । ಪಮಗಾ ಗಾ,ಮ । ದಾ ಸನಿದಮಗರಿ । ಸಾ, ।
**ವೈಕುಂಠ ನ ದಾ ಸ ರ ದಾ ಸ ರ ಮ ನೆ ಯ**

। ,,,ದ ದಾದಾದ । ಮದದಮಗರಿರೀ । ,,,ಗಾಮ ದಾ । ಮದಸನಿದನಿಸನಿ । ದಾ,
**ಹೊರ ಸುತ್ತು ಪ್ರಾ ಕಾ ರವ ಸುತ್ತಿ ನಾ ಬ ರು ವೆ**

। ದಾ, ಗಮಾನಿದದ । ,,ನಿಸ ರಿ ಸಸಾ । ಸಾ ನಿಸಾನಿದಾ । ಸನಿರಿಸಸಾ,, ।
**ಬರು ವ ಹೋಗುವವ ರ ವಿಚಾರಿಸಿ ಬಿ ಡುವೆ**

। ,,ಗಗಾಗಾ ಗಾ । ಗಾಗಾ ಗರಿಮಗ । ರಿಸ ರೀರಿ ರೀ, । ರಿಸಗರಿರೀ,, ।
**ಕರ ದಿ ಕಂ ಬಿಯ ಪೊತ್ತು ಅಲ್ಲಿ ನಿಂ ತಿ ರು ವೆ**

। ,,ನಿಸಾರಿಗಾ । ರೀಸಾ,ನಿ ಸಾ । ದಾ, ದಸನಿದಾ । ಮ ಗಾ ರಿಗಾ ರಿಸ ।
**ಹರಿಯ ಸ ಮ್ಮುಖ ದ ಓ ಲಗ ದೊಳು ಇರುವೆ**

। ,,,ಮದಾದದಾ । ಮದದಾ ನಿದದಮ । ಗರೀ ಗಾ ಮದಾ । ಮದಸನಿದನಿಸನಿ ।
**ಮೀ ಸಲೂ ಳಿ ಗವ ನಾ ಮಾಡಿಕೊಂ ಡಿ ರುವೆ**

। ದಾ, ಗಾಮದಾ । ಮದಸನಿರಿಸಸಾ । ,,,ಸನಿ ದ ದಾ । ಸನಿರಿಸಸಾ,, ।
**ಶೇಷ ಪ್ರ ಸಾ ದ ವ ಉಂಡುಕೊಂ ಡಿ ರುವೆ**

। ,,,ಗಾಗಾ, । ಗಾಗಾ ಗರಿಮಗ । ರಿಸ ದದಾಗರಿ ರಿ । ಸನೀದಾಸನಿಗರಿ ।
**ಶೇಷಾ ಚಲ ನ ಮ್ಮ ನೆಲೆ ಯಾದಿ ಕೇ ಶ ವ ನ**

। ರೀ ನಿಸಾಗರೀ । ,,ಸನೀಸದಾ । ,,ದಾಸನಿದಾ । ಮಾ ರಿ ಗಾರಿಸಾ ।
**ದಾ ಸರ ದಾ ಸರ ದಾ ಸರ ಮನೆ ಗೆ**

## ಭಜರೆ ಹನುಮಂತಂ

ಭಜರೆ ಹನುಮಂತಂ ಮಾನಸ
ಭಜರೆ ಹನುಮಂತಂ

ಕೋಮಲ ಕಾಯಂ ನಾಮಸುದೇಹಂ
ಭಜ ಸಖಸಿಂಹಂ ಭೂಸುರ ಶ್ರೇಷ್ಠಂ

ಮೂರ್ಖ ನಿಶಾಚರ ವನ ಸಂಹಾರಂ
ಸೀತಾದುಃಖವಿನಾಶನಕಾರಂ

ಪರಮಾನಂದ ಗುಣೋದಯ ಚರಿತಂ
ಕರುಣಾರಸ ಸಂಪೂರ್ಣ ಸುಭರಿತಂ

ರಣರಂಗ ಧೀರಂ ಗುಣಗಂಭೀರಂ
ದಾನವ ದೈತ್ಯಾರಣ್ಯ ಕುಠಾರಂ

ಗುರು ಚೆನ್ನಕೇಶವ ಕದಳೀ ರಂಗಂ
ಸ್ಥಿರ ಸದ್ಭಕ್ತಂ ಮುಖ್ಯ ಪ್ರಾಣಂ

**ರಾಗ: ಕಾಪಿ** ಸ ರಿ೨ ಗೆ ಮ೧ ಪ ದ೨ ನಿ೨ ಸ **ಅನ್ಯಸ್ವರ ಗ**೩ **ನಿ೩** **ಆದಿತಾಳ**

। ,,ಸಸಾನಿಪಾ । ,ಗ ರೀಸನೀ । ಸಾ,,,,,, । ರಿಮಪನಿಮಪಸನಿ ॥ ಸಾ
**ಭಜರೆ ಹನುಮಂ ತಂ ಮಾ ನ ಸ**

। ಸಾಸಸಾನಿಪಾ । ,ಗರೀಸನೀ । ಸಾ,,,,,, । ,,,, ,,,, ॥
**ಭಜರೆ ಹನುಮಂ ತಂ**

। ,,ಮಪಾನಿ ನೀ । ಸಾ,,ಸಾ,, । ,,ಪಗಾರಿ ಗಾ । ಸಾರೀಗರಿಸಾನಿರಿಸಾ ॥
**ಕೋ ಮಲ ಕಾ ಯಂ ನಾ ಮಸು ದೇ ಹಂ**

। ,,ಪಪಾ ರಿಸಾ । ನೀದಸನಿದಪಮಪಾ । ,,ಪಸಾನಿಪಾ । ಗರಿರಿಸರಿಮಪನಿ ॥ ಸಾ
**ಭಜ ಸಖ ಸಿಂ ಹಂ ಭೂಸುರ ಶ್ರೇ ಷ್ಠಂ**

। ,,ಸ**ಗಾ ಗ ಗಾ** । **ಗಾಗ**ಮ**ಗಾ**ಮಾ । ,,**ಗ**ಮಾ ನಿಪಾ । ಗಾ,ರಿಸನಿಸಾ ॥
**ಮೂರ್ಖನಿ ಶಾ ಚ ರ ವನ ಸಂ ಹಾ ರಂ**

। ,,ಮನೀಪಾ, । ಮರಿಮರಿಮರಿಸಾ । ರೀ,,ಮಾಪಾ । ಪನಿಪನಿಮಪಾ, ।
**ಸೀ ತಾ ದುಃ ಖ ವಿ ನಾ ಶ ನ ಕಾ ರಂ**

। ,,ಮಪಾನೀ, । ಸಾ,,ಸಾ ಸನಿ । ಸರಿರಿಸರಿಮಗರಿ । ಸಾರಿನಿಸಾ,, ॥
**ಪ ರಮಾ ನಂ ದ ಗು ಣೋ ದ ಯ ಚ ರಿ ತಂ**

। ,,ಪರೀಸಾ, । ಸಾನಿರಿಸನಿ ಪಮನಿಪ । ,,ಪಸಾನಿ ಪಾ । ಗರಿರಿಸರಿಮಪನಿ ॥ ಸಾ
**ಕರುಣಾ ರ ಸ ಸಂ ಪೂ ರ್ಣ ಸು ಭ ರಿ ತಂ**

। ,,**ಗಗಾಗಾಗ** । **ಗಾ**,ಮಸಾಮಮ**ಗಾ**ಪಮ । ,,ರಿ ಮಾಪನಿಪ । ಗಾ,ರಿಸನಿಸಾ ॥
**ರಣರಂಗ ಧೀ ರಂ ಗುಣ ಗಂ ಭೀರಂ**

। ,,ರಿಮಾಪದಾ । ದಾ,,ನಿದನಿದ । ಪಾಪದಾನಿ ಸಾ । ನೀದಸನಿದಪಮನಿಪ ॥
**ದಾ ನವ ದೈ ತ್ಯಾ ರ ಣ್ಯ ಕು ಠಾ ರಂ**

। ,,ಮಪಾ ನಿನೀ । ಸಾ,,ಸಾಸಾ । ,,ಸರಿಸರಿಮಗಾರೀ । ಸಾರಿನಿಸಾ,, ॥
**ಗುರು ಚೆನ್ನ ಕೇ ಶ ವ ಕದ ಳೀ ರಂ ಗಂ**

। ,,ಪಪಾ ರಿಸಾ । ನೀದಸನೀದಾಪಮನಿಪ । ,,ಪಸಾನಿಪಾ । ಗರಿರಿಸರಿಮಪನಿ ॥ ಸಾ
**ಸ್ಥಿರ ಸದ್ ಭ ಕ್ತಂ ಮುಖ್ಯ ಪ್ರಾ ಣಂ**

# ಭಜಿಸಿ ಬದುಕೆಲೊ ಮಾನವ

ಭಜಿಸಿ ಬದುಕೆಲೊ ಮಾನವ ಮನ ಮುಟ್ಟಿ ಶ್ರೀಹರಿಯ
ಅಜ ಭವೇಂದ್ರಾದಿಗಳು ಆದಿ ವಂದಿಪ ಪಾದ

ಪಾಕಶಾಸನಗೊಲಿದು ಬಲಿಯ ಮೆಟ್ಟಿದ ಪಾದ
ಕಾಕು ಶಕಟನ ಒಮ್ಮೆ ಒದ್ದು ಕೊಂದ ಪಾದ
ನಾಕ ಭೀಕರ ಬಕನ ಮೆಟ್ಟಿ ಸೀಳಿದ ಪಾದ
ಲೋಕ ಪಾವನ ಗಂಗೆ ಮೆಟ್ಟಿದ ಪಾದವನು

ಶಿಲೆಯ ಸತಿಯಳ ಬಂಧವಿಮುಕ್ತಿ ಗೊಳಿಸಿದ ಪಾದ
ಒಲಿದು ಪಾರ್ಥನ ರಥವನಿತ್ತಿದ ಪಾದ
ಕಲಿ ಸುಯೋಧನನ ಓಲಗದಿ ಕೆಡಹಿದ ಪಾದ
ಕಲಿಕಿ ಕಾಲಿಂಗನ ಪೆಡೆ ತುಳಿದ ಪಾದವನು

ಗರುಡ ಶೇಷಾದಿಗಳು ಬಿಡದೆ ಪೊತ್ತಿಹ ಪಾದ
ಧರೆಯ ನೀರಡಿ ಮಾಡಿ ಅಳೆದ ಪಾದ
ಸಿರಿ ತನ್ನ ತೊಡೆಯಮೇಲಿರಿಸಿ ಒತ್ತುವ ಪಾದ
ವರ ಕಾಗಿನೆಲೆಯಾದಿಕೇಶವನ ಪಾದವನು

ರಾಗ: ವಲಜಿ (ಕಲಾವತಿ)　　ಸ ಗ² ಪ ದ² ನಿ² ಸ　　ಖಂಡ ಛಾಪು

। ,,ಸ ಸಾಗ ಪಾಪಾ । ಪಾಪಾ ಪದನಿದಪಗ । ,,ಗ ಪಾ ದಾ,ದಾ । ದನಿಗಸಸನಿನಿದದಾ ।
**ಭಜಿಸಿ ಬ ದು ಕೆ ಲೊ ಮ ನು ಜ ಮನ ಮುಟ್ಟಿ ಶ್ರೀ ಹ ರಿ ಯ**
। ,,ನಿದಾ ನಿ ಸಾ,, । ನಿಸಗಾಗಸಸನಿನಿದ । ,,ಗನೀದ ಪಗಾ, । ಗಾಪಾ ಗಾ,,ಸಾ ।
**ಅಜ ಭವೇಂ ದ್ರಾ ದಿ ಗ ಳು ಆ ದಿ ವಂ ದಿ ಪ ಪಾ ದ**

। ,,ಪಗಾಪಸಾ,, । ಸಾಸಾಸಾ ಸಾಸನಿ । ,,ಸನೀಸ ಗಾಪಗ । ಗ ಸಾ, ಸಾ,,ಸಾ ।
**ಪಾ ಕಶಾ ಸ ನ ಗೊಲಿದು ಬಲಿಯ ಮೆ ಟ್ಟಿದ ಪಾ ದ**
। ,,ಗನೀದ ದಾದಾ । ದಾದಾ ದಾದಾದಪ । ,,,ಗಾ ಪ ದನಿಸನಿ । ದಾ,, ,,,,,, ।
**ಕಾ ಕುಶ ಕ ಟ ನ ತುಳಿ ದು ಕೊಂದ ಪಾ ದ**
। ,,ಗಾ ಪದಸನಿನೀ । ನೀದಾ ಸನಿನೀನೀ । ,,,ಪನಿದಪಗಪಗಾ । ಪಾಗಾ ದದದಾನಿದಪಾ ।
**ಲೋಕೇ ಶ ನಿ ಗೆ ಒ ಲಿದು ಪೂಜೆಗೊಂ ಬುವ ಪಾ ದ**
। ,,,ದಸ ಸ ಸದಸನಿ । ನಿದದಪ ಪಾ,,ದಪ । ಪಗ ಗಪಾದನಿದದಪ । ಗಪದಪಗಪಗಗಸಾ ।
**ಲೋಕ ಪಾ ವ ನ ಗಂ ಗೆ ಜನಿ ಸಿದ ಪಾ ದ**

। ,,ಸಗಾಪ ಗಪಗಗ । ಸಗಸಾ,, ಸಾ,, । ನೀ,,ನೀ ಸಾ ಸಾ । ಸಾಸಾ ಸಾ,,ಸಾ ॥
**ಶಿಲೆಯ ಸ ತಿ ಯಳ ಸೌಂ ದ ರ್ಯಗೊಳಿ ಸಿ ದ ಪಾ ದ**
। ,,ಸ ಸಾಗ ಪಾ,,ಪಾ ದಾನಿದಪಗಗಾ । ,,ಗಗಾಪ ದಾ ದಾ । ದಾನಿದಪಾ ಪದಸನಿದಾ ॥
**ಒಲಿದು ಪಾ ರ್ಥಗೆ ಧರೆಯನೊತ್ತಿ ದ ಪಾ ದ**
। ,,ಪಗಾಪ ಸಾ,, । ಸಾಸಾಸಾ ಸಾ,, । ಸನಿಸನಿಸಾ, ಗಗಾ । ಸಾನೀ ಸಾ,,ಸಾ ॥
**ಒಲಿ ಸಿ ಕೌ ರ ವ ರ ಕಾ ಳ ಗ ದಿ ಕೆಡ ಹಿದ ಪಾ ದ**
। ,,ದಸಾಸ ಸದಗಸ । ಸನಿನಿದದಾದಾದಾ । ,,ಗ ಪಾದ ನಿದದಪ । ಗಪದಪಗಪಗಗಸಾ ।
**ಒಲಿದು ಕಾ ಳಿಂ ಗ ನ ನು ತುಳಿ ದ ಪಾ ದ**

**ಮೊದಲನೆಯ ಚರಣದಂತೆ**

**ಗರುಡ ಶೇಷಾದಿಗಳು ಪೊತ್ತುಕೊಂಡಿಹ ಪಾದ**
**ಧರೆಯ ನೀರಡಿ ಮಾಡಿ ಅಳೆದ ಪಾದ**
**ಸಿರಿ ತನ್ನ ತೊಡೆಯಮೇಲಿರಿಸಿ ಸೇವಿಪ ಪಾದ**
**ವರ ಕಾಗಿನೆಲೆಯಾದಿಕೇಶವನ ಪಾದ**

## ಮಂಗಳಂ ಜಯ ಮಂಗಳಂ
## ಅಂಧಕನನುಜನ ಕಂದನ ತಂದೆಯ

ಅಂಧಕನನುಜನ ಕಂದನ ತಂದೆಯ
ಕೊಂದನ ಶಿರದಲಿ ನಿಂದವನ
ಚಂದದಿ ಪಡೆದವನ ನಂದನೆಯುಳನೊಲ
ವಿಂದ ಧರಿಸಿದ ಮುಕುಂದನಿಗೆ

ರಥವನಡರಿ ಸುರ ಪಥದಲಿ ತಿರುಗವ
ಸುತನಿಗೆ ಶಾಪವನಿತ್ತವನ
ಖತಿಯನು ತಡೆದನಸತಿಯ ಜನನಿ ಸುತ
ಸತಿಯರನಾಳಿದ ಚತುರನಿಗೆ

ಹರಿಯ ಮಗನ ಶಿರ ತರಿದನ ತಂದೆಯ
ಹಿರಿಯ ಮಗನ ತಮ್ಮನ ಪಿತನ
ಭರದಿ ಭಕ್ಷಿಸಿದನ ಶಿರದಲಿ ನಟಿಸಿದ
ವರ ಕಾಗಿನೆಲೆಯಾದಿಕೇಶವನಿಗೆ

ರಾಗ: ಮೋಹನ ಸ ರಿ ಗ ಪ ದ ಸ ರೂಪಕ ತಾಳ

। ದಸಸಾಸಾದಸ ದಪಪಾ । ಪದಪಾಗಾ ಗಪಗರಿರೀ । ರಿಗ ರೀಸಾ ಸರಿಸದದಾ । ದಗಗರಿರೀರೀ,,,, ॥
**ಅಂಧಕ ನನುಜ ನ ಕಂ ದ ನ ತಂದೆ ಯ ಕೊಂದ ನ ಶಿರದ ಲಿ ನಿಂದ ವ ನ**

। ಗಪಪಾಪಾ ದಸ ದಪಪಾ । ಪದಪಗಗಾಗ ಪಾಗರಿ ರೀ । ಗದಪಾ, ದಪಗಗರಿರೀ । ರಿ ರೀ ಗರಿಸಸಾರಿಸದಾ ॥
**ಚಂದ ದಿ ಪಡೆದವನ ನಂ ದ ನೆ ಯಳ ನೊಲ ವಿಂ ದ ಧರಿ ಸಿ ದ ಮುಕುಂದ ನಿಗೆ**

। ದಾ ಗಾರೀ,, ರೀಗರಿಸದ । ಸಾ ರೀಗರಿಸದ ,,,,,, । ದಾ ಗಾರೀ,, ರೀಗರಿಸದ । ಸಾ ಸಾಸಾ ,,,,,, ।
**ಮಂಗ ಲಂ ಜ ಯ ಮಂಗ ಲಂ ಮಂಗ ಲಂ ಜ ಯ ಮಂಗ ಲಂ**

। ದಸಸಾಸಾದಸ ದಾಪಾ । ಪದದಾಪಾ ಗಪಾಗಾರೀ । ರಿ ಗರೀಸಾ ಸರೀಸಾದಾ । ದಾಗಾರೀರೀ,,,, ॥
**ರಥವ ನ ಡರಿ ಸು ರ ಪಥದ ಲಿ ತಿರು ಗುವ ಸುತನಿ ಗೆ ಶಾ ಪ ವ ನಿ ತ್ತ ವ ನ**

। ಗ ಪಪಾಪಾ ದಸಾದಪಪಾ । ದಸಾದ ಪಾದಪಾ ಗರಿರೀ । ಗದಾಪಗಗಾಗಪಾಗರಿರಿ । ರಿಗಾರಿಸಾಸರೀದಾ, ॥
**ಖತಿಯನು ತಡೆ ದ ನ ಸತಿ ಯ ಜ ನನಿ ಸು ತ ಸತಿ ಯರ ನಾ ಳಿ ದ ಚತುರನಿ ಗೆ**

। ದಾ ಗಾರೀ,, ರೀಗರಿಸದ । ಸಾ ರೀಗರಿಸದ ,,,,,, । ದಾ ಗಾರೀ,, ರೀಗರಿಸದ । ಸಾ ಸಾಸಾ ,,,,,, ।
**ಮಂಗ ಲಂ ಜ ಯ ಮಂಗ ಲಂ ಮಂಗ ಲಂ ಜ ಯ ಮಂಗ ಲಂ**

**ಮೇಲಿನ ಚರಣದಂತೆ**

**ಹರಿಯ ಮಗನ ಶಿರ ತರಿದನ ತಂದೆಯ ಹಿರಿಯ ಮಗನ ತಮ್ಮನ ಪಿತನ**
**ಭರದಿ ಭಕ್ಷಿಸಿದನ ಶಿರದಲಿ ನಟಿಸಿದ ವರ ಕಾಗಿನೆಲೆಯಾದಿಕೇಶವನಿಗೆ**
**ಮಂಗಲಂ ಜಯ ಮಂಗಲಂ ಮಂಗಲಂ ಜಯ ಮಂಗಲಂ**

# ಮರೆಯದಿರು ಮರೆಯದಿರು ಎಲೆ ಮಾನವ

ಮರೆಯದಿರು ಮರೆಯದಿರು ಎಲೆ ಮಾನವ
ನಾರಾಯಣನ ಸ್ಮರಣೆಯನು ಮಾಡು ಮನುಜಾ

ರಂಗನಾಥನುಇರಲಿಕ್ಕೆ ಜಂಗುಳಿ ದೈವಗಳೇಕೆ
ತುಂಗಭದ್ರೆ ಇರಲಿಕ್ಕೆ ಕೆರೆಬಾವಿಗಳೇಕೆ
ಅಂಗನೆ ಸತಿ ಇರಲಿಕ್ಕೆ ಬಣಗು ಹೆಣ್ಣುಗಳೇಕೆ
ಮಂಗಳಾತ್ಮಕನಿರಲಿಕ್ಕೆಪರದೈವವೇಕೆ

ಹಾಲು ಹಳ್ಳವಿರಲಿಕ್ಕೆವಾಳಿಯವ ತರಲೇಕೆ
ಮೇಲು ನಾಮವಿರಲಿಕ್ಕೆ ಕಟಕು ಇನ್ನೇಕೆ ಬಲ
ಹನುಮನಿರಲಿಕ್ಕೆ ಹುಲು ಕಪಿಗಳೇಕೆ
ಒಳ್ಳೆ ತುಳಸಿ ಇರಲಿಕ್ಕೆ ಕಗ್ಗೊರಲೇಕೆ

ಚಿನ್ನದ ಗಿರಿ ಇರಲಿಕ್ಕೆ ಕಬ್ಬಿಣದ ಮೊರಡಿ ಏಕೆ
ರತ್ನ ಮಾಣಿಕವಿರಲಿಕ್ಕೆ ಕಾಜಿನ ಹರಳೇಕೆ
ಅನ್ನ ತುಪ್ಪವಿರಲಿಕ್ಕೆ ಮದ್ಯಪಾನಗಳೇಕೆ
ಚೆನ್ನಾದಿಕೇಶವನಿರೆ ಬಿನುಗು ದೈವಗಳೆಕೆ

**ರಾಗ: ಸಾರಂಗ** ಸ ರಿ೨ ಸ ಪಾ ಮ೨ ಪ ದಾ೨ ನಿ೩ ಸ
ಸ ನಿ೩ ದಾ೨ ಪ ಮ೨ ರಿ೨ ಗ೩ **ಮ**೧ ರೀ೨ ಸ **ತ್ರಿಶ್ರ ನಡೆ ಆದಿತಾಳ**

। ರಿ ಸಸ ಸಸಾ ಮಪಪ ಪಪಾ । ಮಪ ಪಮದಪ । ಮಾ,,,, ॥
**ಮರೆಯದಿರು ಮರೆಯದಿರು ಎಲೆ ಮಾ ನ ವ**

। ಮಪನಿದದನಿಮಪಪ ಮಪಪ । ಮಪ ಪಮರಿರಿ ರಿ ಗಗ**ಮ**ರಿಸ ॥
**ನಾ ರಾ ಯಣನ ಸ್ಮರಣೆ ಯನು ಮಾ ಡು ಮನುಜಾ**

। **ಮ**ರಿರಿಮಪ ಪ ಮಪಪಾಪಾ । ಪದದ ದ ದಾ । ದಸ̇ದಾಪಾ ॥
**ರಂ ಗನಾಥನು ಇ ರಲಿ ಕ್ಕೆ ಜಂಗುಳಿ ದೈ ವಗಳೇ ಕೆ**

। ಸ̇ಾ ಸ̇ಸ̇ಾನಿ ದನಿಪಾಪಾ । ನಿದಪಾಪಮ । ಗಮಪಾ,, ॥
**ತುಂಗಭದ್ರೆ ಇರಲಿ ಕ್ಕೆ ಕೆರೆಬಾವಿಗ ಳೇ ಕೆ**

। ಮಪಪಪ ದಪ ಸ̇ಸ̇ಸ̇ಾಸ̇ಾ । ಗ̇ ರಿ̇ ಸ̇ ಸ̇ಾನಿ । ದಪದನಿಸ̇ಾ ॥
**ಅಂ ಗನೆ ಸತಿ ಇರಲಿಕ್ಕೆ ಬಣಗು ಹೆಣ್ಣು ಗಳೇ ಕೆ**

। ಸ̇ ಸ̇ಸ̇ಾಸ̇ ನಿದನಿಪಾಪಾ । ಮಪನಿದದಪ । ರಿಗಗ**ಮ**ರಿಸ ॥
**ಮಂಗಳಾತ್ಮಕನಿರಲಿ ಕ್ಕೆ ಪ ರದೈ ವ ವೇಕೆ**

**ಮೇಲಿನಂತೆ**

**ಹಾಲು ಹಳ್ಳವಿರಲಿಕ್ಕೆ ವಾಳಿಯುವ ತರಲೇಕೆ**
**ಮೇಲು ನಾಮವಿರಲಿಕ್ಕೆ ಕಟಕು ಇನ್ನೇಕೆ ಬಲ**
**ಹನುಮನಿರಲಿಕ್ಕೆ ಹುಲು ಕಪಿಗಳೇಕೆ**
**ಒಳ್ಳೆ ತುಳಸಿ ಇರಲಿಕ್ಕೆ ಕಗ್ಗೊರಲೇಕೆ**

। ರೀರಿರಿ ಪಮ ದಪಪಾಪಾ । ದಾದ ದದಾ । ದ ದಸ̇ ದಾಪ ॥
**ಚಿನ್ನದ ಗಿರಿ ಇರಲಿ ಕ್ಕೆ ಕ ಬ್ಬಿಣದ ವೊರಡಿ ಏ ಕೆ**

। ಸಾಸ ಸ̇ಾ, ದನಿಪಪಪ । ಪಾ ನಿದಪಮ । ಪಮರಿಮಪಾ ॥
**ರ ತ್ನ ಮಾಣಿಕವಿರಲಿ ಕ್ಕೆ ಕಾ ಜಿನ ಹರ ಳೇ ಕೆ**

। ನಿಪಪ ಸ̇ಾನಿ ರಿ̇ಸ̇ಸ̇ಾಸ̇ಾ । ಗ̇ರಿ̇ಸ̇ಸ̇ನಿದ । ದದನಿಸ̇ಾ, ।
**ಅ ನ್ನತುಪ್ಪವಿರಲಿಕ್ಕೆ ಮದ್ಯಪಾನ ಗಳೇ ಕೆ**

। ರಿ**ಮ**ರಿಸ̇ಾ ಸ̇ದಾನಿದಪಪ । ಮದ ಪ ಪಾ ಮ । ರಿರಿಗ**ಮ**ರಿಸ ॥
**ಚೆ ನ್ನಾದಿಕೇಶವನಿರೆ ಬಿ ನುಗು ದೈವ ಗಳೇಕೆ**

# ಮುಟ್ಟದಿರೊ ಎನ್ನನು-ರಂಗಯ್ಯ

ಮುಟ್ಟದಿರೊ ಎನ್ನನು-ರಂಗಯ್ಯ
ಮುಟ್ಟದಿರೊ ಎನ್ನನು

ಮುಟ್ಟದಿರೊ ಎನ್ನ ಮುಂಗೈಯಸೆಳವಿಗೆ
ಮುತ್ತೆಲ್ಲ ಸಡಲುವವೊ ಹೇ ಮುದ್ದುರಂಗ

ಎರೆಳೆ ಕಂಗಳ ಬಾಲೆ ಕೆರೆಯ ಮಳಲು ಚೆಲ್ಲಿ
ಗೆಳೆತೇರ ಕೂಡಾಡಿ ಕಲಿತ್ಯಲ್ಲೊ ಬೆಡಗ
ಸೊಕ್ಕಿನುಡುಗ ಬಿಡು ಎನ್ನ ಸೆರಗ

ಅತ್ತಗೊಬ್ಬಳ ಕೂಡ ಆಡಿ ಬರುವುದ ಕಂಡೆ
ಸತ್ಯವ ಮಾಡದಿರೊ ಹೇ ಕರಿ ನಂಟ
ಬಣ್ಣದ ಭಂಟ ನೂರೆಂಟ ಬಿಡು ಎನ್ನ ಗಂಟ

ಅಂಗೈಯ ಅರಗಿಣಿ ಮುಂಗೈಯ ಮುರಹರಿ
ಶೃಂಗಾರವಾಗಿತ್ತೆ ನಾ ಕಂಡೆ ಕಲೆಯ
ಕಾಗಿನೆಲೆಯ ಕನಗೊಬ್ಬಗೊಲಿಯ

ರಾಗ:ಉದಯರವಿಚಂದ್ರಿಕ ಸ ಗ೨ ಮ೧ ಪ ನಿ೨ ಸ ಏಕ ತಾಳ

। ,,,ಸಾ ನಿ ಪಾಪಾಮನಿಪಾ ಗಾ,ಮಾ । ಪಾ,,,,ಪಾ । ಪಾಮನಿಪಮಗಮಗಾ ।[ ಪಾ,,,,ಸಾ । ಸಾನಿಗಸಸನಿಸಪಾ ।]
**ಮುಟ್ಟದಿ ರೊ ಎ ನ್ನ ನು ರಂ ಗ ಯ್ಯ [ನು ರಂ ಗ ಯ್ಯ]**
। ,,,ಸಾ ನಿ ಪಾಮಪಾ ಗಾ,ಮಾ । ಪನಿನೀಸನಿಪಾ,, । ,,,, ,,,, ॥
**ಮುಟ್ಟದಿ ರೊ ಎ ನ್ನ ನು**

। ,,,ಸಾ ನಿ ಪಾ । ಸಾ, ಸಾ,ಸಾ । ,,,ನಿಸ ಸಾ ಸ । ಸಾಗಾಮಗಸನಿನಿಪ ।
**ಮುಟ್ಟದಿ ರೊ ಎ ನ್ನ ಮುಂಗೈಯ ಸೆ ಳ ವಿ ಗೆ**
। ,,,ಸಾ ಸಾಸ ಸಾಗಾಮಗಸನಿಸಾಗಸ । ನಿಪಾ,,,ಸಾ । ನೀ ಸ ನಿಪಾಪಸ ।
**ಮುತ್ತೆಲ್ಲ ಸ ಡ ಲು ವ ವೊ ಹೇ ಮುದ್ದುರಂ ಗ ॥ ಮುಟ್ಟದಿರೊ ॥**

। ,,,ಮಪಮ ಪಾ । ಪಮಾ ಪಾ,ಪಾ । ,,ಸನೀಪ ಮಾ । ಪಪಾ ಮಪಾಗಾ ।
**ಎ ರೆಳೆ ಕಂ ಗಳ ಬಾ ಲೆ ಕೆರೆಯ ಮ ಳಲು ಚೆ ಲ್ಲಿ**
। ,,ನಿಸಾಸ ಸಾ । ನೀ,ಸಾ,ಸಾ । ,,ಗಸಾನೀಪ । ಸಾಸಾಸಾ,, ।
**ಗೆಳೆ ತೇರ ಕೂಡಾಡಿ ಕಲಿ ತ್ಯಲ್ಲೊ ಬೆ ಡ ಗ**
। ,,,ಸಗಸನೀಸಗಗಾಗಾ,, । ಸನಿನಿಪ ಪಮಮಗ । ಗಗಸಾಗಮಪನಿ । ಸಾ
**ಸೊ ಕ್ಕಿನು ಡುಗ ಬಿ ಡು ಎ ನ್ನ ಸೆ ರ ಗ**

। ,,,ಸಾಸ ನೀ ಸ ಸಾ ಸಾ,ಸಾ । ,,,ಗಮಮ ಗ ಗ । ಮಗಾ ಗಮಾಮಾ ।
**ಅತ್ತಗೊಬ್ಬಳ ಕೂಡ ಆ ಡಿ ಬರು ವುದ ಕಂ ಡೆ**
। ,,,ಸಾಸ ಸಾ ನೀ,,,ನಿನೀ । ಸಾ,,,,ಸಾ । ನಿಸಾ ನಿಸಾಪಾ ।
**ಸ ತ್ಯವ ಮಾಡದಿ ರೊ ಹೇ ಕರಿ ನಂ ಟ**
। ಸಗಸ ನಿ ಸಗಗಾ ಗಸಸನಿನಿಪಪಮ । ಗಸಸನಿ ನಿಪಪಮ । ಗಾಸಾಗಮಪನಿ ॥ ಸಾ
**ಬ ಣ್ಣದ ಭಂಟ ನೂ ರೆಂ ಟ ಬಿ ಡು ಎ ನ್ನ ಗಂ ಟ**

। ,,,ಮಪಪಾಪ ,,ಮಪಾಪಪಾ । ,,ನಿಸಾ ನೀಪಾ । ಪಮದಪಮಗಗಾ ।
**ಅಂ ಗೈಯ ಅ ರ ಗಿಣಿ ಮುಂಗೈಯ ಮು ರ ಹ ರಿ**
। ,,,ಸಾ ಸಾ ಸಸಾ,ಸಾ,ಸಾ । ,,ಗಸಾ ನಿಪನಿ । ಸಾಸಾಸಾ,, ॥
**ಶೃಂಗಾರವಾಗಿ ತ್ತೆ ನಾ ಕಂಡೆ ಕ ಲೆಯ**
। ,,,ಸಗಸನೀಸಗಗಾಗಾ,, । ಗಸಸನಿನಿಪಪಮ । ಗಾ ಸಾಗಮಪನಿ ॥ ಸಾ
**ಕಾ ಗಿ ನೆ ಲೆಯ ಕ ನ ಗೊಬ್ಬ ಗೊಲಿಯ**

# ಮುಟ್ಟಬೇಡಿ ಮುಟ್ಟಬೇಡಿ ಮುರಹರನ ದಾಸರನು

ಮುಟ್ಟಬೇಡಿ ಮುಟ್ಟಬೇಡಿ ಮುರಹರನ ದಾಸರನು
ಕಟ್ಟು ಮಾಡಿದನಂತೆ ಯಮ ತನ್ನ ದೂತರಿಗೆ

ತಿರುಮಣ್ಣು ಶ್ರೀಚೂರ್ಣ ಪೂರ್ಣ ದ್ವಾದಶ ನಾಮ
ಸಿರಿ ತುಳಸಿ ವರಮಾಲೆ ಕೊರಳಿನೊಳಗಿಪ್ಪವರ
ತಿರುಮಂತ್ರ ತೀರ್ಥಪ್ರಸಾದಕೊಳಗಾದವ
ತಿರುಪತಿ ಯಾತ್ರೆಯನು ಮಾಡಿದ ಮಹಾತ್ಮರನು

ಬಡವನಾಗಲಿ ಅವನು ಬಲ್ಲಿದನೂ ಆಗಲಿ
ಕಡು ಮೂರ್ಖ ಘೋರ ಪಾತಕಿಯಾಗಲಿ
ನುಡಿ ನುಡಿಗೆ ಮಾಧವನ ಬಿಡದೆ ಕೊಂಡಾಡುವರ
ಗೊಡವೆ ಬೇಡೆಂದ ಯಮ ತನ್ನ ದೂತರಿಗೆ

ವಾಸುದೇವ ಎಂಬ ವಾಖ್ಯವನು ಭಜಿಸುವರ
ಬೇಸರಿಸದೆ ಶ್ರೀಹರಿಯ ಧ್ಯಾನದೊಳಗಿಪ್ಪವರ
ವಾಸುಕಿಶಯನ ಕಾಗಿನೆಲೆಯಾದಿಕೇಶವನ
ದಾಸರ ದಾಸರ ದಾಸನೆಂತೆಂಬರ

ರಾಗ: ಕಾಮವರ್ಧಿನಿ ಸ ರಿ ಗ ಮ ಪ ದ ನಿ ಸ ತ್ರಿಶ್ರ ನಡೆ ಆದಿತಾಳ

। ಪಾ ದ ಪಾ ಮ ಗಾ ಮಗರಿ ಸ । ಸ ರಿಗ ರಿಗಾ । ಪಾದಪಪಾ ॥
ಮುಟ್ಟಬೇಡಿ ಮುಟ್ಟಬೇಡಿ ಮುರಹರನ ದಾಸರನು
। ಪಾದ ಪಾ, ದನಿ ಸಾಸಾ । ಸ ನಿ ಸನಿದಪ । ಪಮಗಮದಾ ॥
ಕ ಟ್ಟು ಮಾಡಿದನಂತೆ ಯಮ ತ ನ್ನ ದೂ ತರಿ ಗೆ

। ಮಗ ಗಾ,ಗ ಗಮಪಾ,ಪ । ಪಾ ಪ ಪಾ, । ಗಮಗರಿಸಾ ॥
ತಿ ರುಮಣ್ಣು ಶ್ರೀ ಚೂರ್ಣ ಪೂರ್ಣ ದ್ವಾ ದಶ ನಾಮ
। ಪಮಪದಪಾ ಗಮಗರಿಸಾ । ಸ ಸರಿಸ ರೀ । ಪಾಪ ಪ ಪಾ ॥
ಸಿರಿ ತುಳಸಿ ವರಮಾಲೆ ಕೊರಳಿನೊಳ ಗಿ ಪ್ಪವರ
। ಪಪ ಪಾ ದಾ ಸಾಸಾ, ಸ । ಸಾಸಸ ಸಾ । ಸಾ ರಿ ಸಸಾ ॥
ತಿರುಮಂತ್ರ ತೀರ್ಥ ಪ್ರ ಸಾದಕೊಳ ಗಾದವರ
। ಸಸ ಸ ಸಸನಿ ದಸ ನಿ ದ ಪಮ । ಪನಿ ದಪಾ ಮ । ಮಗಮಪಪದ ॥
ತಿರುಪತಿಯ ಯಾತ್ರೆಯನು ಮಾಡಿದ ಮ ಹಾ ತ್ಮರನು

। ಮಗಗಗಮಾಮಮ ಮಮಮಾ । ಪಾಪ ಪಮಗ । ಮಗರಿಸಾ, ॥
ಬ ಡವನಾ ಗ ಲಿ ಅ ವ ನು ಬ ಲ್ಲಿದನೂ ಆ ಗಲಿ
। ಸಸ ಪಾ, ಪ ಮಗಮ ಗಗರಿ । ಸರಿಗಾ, ಮ । ಪಾ,,,, ॥
ಕಡು ಮೂರ್ಖ ಘೊ ರ ಪಾ ತಕಿಯಾಗ ಲಿ
। ದ ಪ ದ ಪಪದ ದಸ ಸ ಸ ಸಾ । ದಗ ರಿ ಸಾ, । ಸನಿದ ನಿ ಸಾ ॥
ನುಡಿ ನುಡಿಗೆ ಮಾಧವನ ಬಿಡದೆ ಕೊಂ ಡಾಡುವರ
। ದ ರಿ ಸ ಸಾನಿದಸನಿ ದ ಪಾ । ಪನಿದ ಪಾಮ । ಗರಿಗಮಪದ ॥
ಗೊಡವೆ ಬೇ ಡೆಂದ ಯಮ ತ ನ್ನ ದೂ ತರಿಗೆ

। ಸಗಗ ಗಾ,ಗಮ ಮಾಮಗ । ಪಾ ಪ ಪಮಾ । ಗ ಮಗ ರಿ ಸಾ ।
ವಾಸುದೇವ ಎಂ ಬ ವಾಖ್ಯವನು ಭಜಿ ಸುವರ
। ಪಾಪದಪಮ ಗಮಗ ರಿ ಸಾ । ಸಾ ರಿಗ ಮಾ । ಪಾಪ ಪಪಾ ।
ಬೇಸರಿಸದೆ ಶ್ರೀ ಹರಿಯ ಧ್ಯಾನದೊಳ ಗಿ ಪ್ಪವರ
। ಪಾ ಪ ಪಾದಸಸ ಸ ಸಾಸ । ಸಸ ಸಗರಿಸ । ಸನಿದನಿ ಸಾ ॥
ವಾಸುಕಿ ಶಯನ ಕಾಗಿ ನೆಲೆಯಾ ದಿ ಕೇ ಶವನ
। ಸಾ ಸಸಾ, ನಿಸನಿದಪಾ । ಪದಪಪಾಮ । ಗಾ ಮಪದಸ ॥
ದಾಸರ ದಾಸರ ದಾ ಸನೆಂ ತೆಂಬ ವರ

# ಮುತ್ತು ಬಂದಿದೆ ಕೇರಿಗೆ

ಮುತ್ತು ಬಂದಿದೆ ಕೇರಿಗೆ – ಜನರೆ ಕೇಳಿ
ಭಕ್ತಿಯುಳ್ಳವರೆಲ್ಲ ಕಟ್ಟಿಕೊಳ್ಳಿ ಸೆರಗಳಿ ಕಟ್ಟಿಕೊಳ್ಳಿ

ಥಳಥಳಿಸುವ ಮುತ್ತು ಕಮಲ ನೇತ್ರದ ಮುತ್ತು
ಕಲುಷ ಪರ್ವತಕಿದು ಕುಲಿಶವಾಗಿಹ ಮುತ್ತು
ಹಲಧರಾನುಜನೆಂಬ ಪವಿತ್ರ ನಾಮದ ಮುತ್ತು
ಒಲಿದು ಭಜಿಪರ ಭವವ ತರಿದು ಕಾಯುವ ಮುತ್ತು

ಅಂಜದಿದ್ದವರಿಗೆ ಅಂಜಿಕೆ ತೋರುವ ಮುತ್ತು
ಭಂಜಿಸಿದವರಿಗೆ ಭಯವ ತೋರುವ ಮುತ್ತು
ಸಂಜೀವರಾಯರ ಹೃದಯದೊಳಗಿನ ಮುತ್ತು
ಕಂಜಭವಾದಿಗಳೆ ಶಿರಸಾವಹಿಸುವ ಮುತ್ತು

ಜ್ಞಾನವೆಂಬ ದಾರದಲ್ಲಿ ಪೋಣಿಸಿ ನೋಡುವ ಮುತ್ತು
ಜ್ಞಾನಿಗಳ ಮನದಲ್ಲಿ ಮೆರೆವ ಮುತ್ತು
ಆನಂದತೀರ್ಥರ ಮನದಲೊಪ್ಪುವ ಮುತ್ತು
ಶ್ರೀನಿಧಿ ಆದಿಕೇಶವನೆಂಬ ಆಣಿಮುತ್ತು

ರಾಗ: ಹರಿ ಕಾಂಭೋಜಿ    ಸ ರಿ ಗ ಮ ಪ ದ ನಿ ಸ    ತ್ರಿಶ್ರ ನಡೆ ಏಕತಾಳ

। ದಸಸ ಸಾ ಸ । ರಿಮ ಮಾಮಮ । ಗಗಗಾ ಗರಿ । ಗರಿಸಾ,, ।
ಮುತ್ತು ಬಂದಿ ದೆ ಕೇ ರಿ ಗೆ ಜನರೆ ಕೇ ಳಿ

। ಸರಿರಿ ರೀ ನಿ । ನಿ ಸಸಾರೀ । ಗಾಗಾರಿಸ । ಸಾ ಸಸಸ ರಿ । ಗಾಗಾರಿಸ । ಸಾ, ,,, ।
ಭ ಕ್ತಿಯುಳ್ಳ ಜನರೆ ಲ್ಲ ಕ ಟ್ಟಿಕೊ ಳ್ಳಿ ಸೆರಗಲಿ ಕ ಟ್ಟಿಕೊ ಳ್ಳಿ

। ಗಪಪಪಪಾ । ದಸ ಸಾ ಸಾ । ನಿನಿ ನಿದ ನಿದ । ದ ನಿ ದಪಪಾ ।
ಥಳಥಳಿಸು ವ ಮುತ್ತು ಕಮಲ ನೇ ತ್ರದ ಮುತ್ತು

। ಗಪ ಪಾ ಪಾ । ದ ಸಾಸಸಾ । ನಿ ನಿನೀನಿದ । ದನಿ ದಪಪಾ ।
ಕಲುಷ ಪ ರ್ವತ ಕಿದು ಕುಲಿಶ ವಾ ಗಿಹ ಮುತ್ತು

। ಪದದಾದಾ । ಪದಪಮಮಾ । ಪದಾದ ದಾ । ಮಪ ಮಮಮ ।
ಹಲಧ ರಾ ನು ಜನೆಂಬ ಪವಿ ತ್ರನಾ ಮದ ಮು ತ್ತು

। ಗಪಪಾ ಮಗ । ಗರೀ,,, । ಗ ಗ ಗ ಗಗಮ । ಗ ರಿ ರಿ ರೀ ರಿ ।
ಒಲಿದು ಭಜಿ ಪರ ಭವವ ತರಿದು ಕಾಯುವ ಮುತ್ತು

। ಗಪಪಾ ಮಗ । ಗರೀ,,, । ರಿ ರಿರಿ ರಿರಿಗ । ರಿ ರಿ ಸ ಸಾ ಸ ।
ಒಲಿದು ಭಜಿ ಪರ ಭವವ ತರಿದು ಕಾಯುವ ಮುತ್ತು

। ಗಪಪಾಪಾ । ದ ಸಸಸರಿಸ । ನೀ ನಿದ ದಾ । ದ ನಿ ದಪಪಾ ।
ಅಂಜ ದಿ ದ್ದವರಿಗೆ ಅಂಜಿಕೆ ತೋ ರುವ ಮುತ್ತು

। ಗಪಪಪಾ, । ದಸ ಸಸರಿಸ । ನಿ ನಿ ನೀ ನಿದ । ದ ನಿ ದಪಪಾ ।
ಭಂಜಿಸಿ ದವರಿಗೆ ಭಯವ ತೋ ರುವ ಮುತ್ತು

। ಪದದಾದಾ । ಪಾಮಮಾ, । ಪ ದದಾದ ಪ । ಪದ ಪಮಮಾ ।
ಸಂ ಜೀವ ರಾಯರ ಹೃದಯದೊಳ ಗಿನ ಮು ತ್ತು

। ಗಪಪಾದಪ । ಮಗಗಗರೀ । ರಿರಿರೀಮಗ । ಗ ರಿ ರೀ ರೀ ।
ಕಂ ಜ ಭ ವಾ ದಿಗಳೆ ಶಿರಸಾವಹಿ ಸುವ ಮುತ್ತು

। ಗಪಪಾದಪ । ಮಗಗಗರೀ । ರಿರಿರೀ ರಿಗ । ರಿ ಸ ಸಾ ಸಾ ।
ಕಂ ಜ ಭ ವಾ ದಿಗಳೆ ಶಿರಸಾವಹಿ ಸುವ ಮುತ್ತು

ಮೇಲಿನ ಚರಣದಂತೆ

ಜ್ಞಾನವೆಂಬ ದಾರದಲ್ಲಿ ಪೋಣಿಸಿ ನೋಡುವ ಮುತ್ತು
ಜ್ಞಾನಿಗಳ ಮನದಲ್ಲಿ ಮೆರೆವ ಮುತ್ತು
ಆನಂದತೀರ್ಥರ ಮನದಲೊಪ್ಪುವ ಮುತ್ತು
ಶ್ರೀನಿಧಿ ಆದಿಕೇಶವನೆಂಬ ಆಣಿಮುತ್ತು

# ರಾಮ ಗೋವಿಂದ ಹರೆ

ರಾಮ ಗೋವಿಂದ ಹರೆ ಕೃಷ್ಣ ಗೋವಿಂದ
ದಾಮೋದರ ಹರಿ ವಿಷ್ಣು ಮುಕುಂದ

ಮಚ್ಛವತಾರದೊಳಾಡಿದನೆ – ಮಂದ
ರಾಚಲ ಬೆನ್ನೊಳಾಂತವನೆ
ಅಚ್ಚ ಸೂಕರನಾಗಿ ಬಾಳಿದನೆ – ಮದ
ಹೆಚ್ಚಿ ಹಿರಣ್ಯಕನ ಸೀಳಿದನೆ

ಬಲಿಯೊಳು ದಾನವ ಬೇಡಿದನೆ – ಕ್ಷಾತ್ರ
ಕುಲವ ಬಿಡದೆ ಕ್ಷಯ ಮಾಡಿದನೆ
ಜಲನಿಧಿಗೆ ಬಿಲ್ಲ ಹೂಡಿದನೆ – ಕಾಮ
ಗೊಲಿದು ಗೊಲ್ಲತಿಯೊಳಾಡಿದನೆ

ಸಾಧಿಸಿ ತ್ರಿಪುರರ ಗೆಲಿದವನೆ – ಪ್ರತಿ
ವಾದಿಸಿ ಹಯವೇರಿ ನಲಿದವನೆ
ಭೇದಿಸಿ ವಿಶ್ವವ ಗೆಲಿದವನೆ – ಬಡ
ದಾದಿ ಕೇಶವರಾಯ ನಮಗೊಲಿದವನೆ

ರಾಗ: ಸೌರಾಷ್ಟ್ರ ಸ ರಿ ಗ ಮ ಪ ದ ನಿ ಸ ಸ ನಿ ದಾ ಪ ಮ ಗ ರಿ ಸ ಆದಿ ತಾಳ

। ,,,ದನಿಸ ಸಾ ಸನಿದಾ ನಿದಪಾ । ,,ಮಪಾದ ಮಾ । ಮಗಪಮಗಮರೀ ॥
ರಾ ಮ ಗೋವಿಂದ ಹ ರೆ ಕೃ ಷ್ಣ ಗೋ ವಿಂ ದ
। ,,ಸಸಾದಾ, ರಿಸ ರಿಸರಿಸರೀ । ,,ರೀಮ ಪಮಾ । ಪಾನಿದನಿಪಾ ॥
ದಾ ಮೋದರ ಹ ರಿ ವಿಷ್ಣು ಮು ಕುಂ ದ

। ,,,ಮಾದಪಪ ಪಾ,ಪಪಾ ಪಾ । ,,,ಮಪದಪಾ । ಮಾ,ಗರಿಸರೀ ॥
ಮ ಚ್ಛಾವ ತಾ ರದೊಳು ಆ ಡಿದ ನೆ
। ,,,ದಸಾಸಾರಿಸರಿಸರಿಸರೀ । ,,ರಿಮಾಪಮಾ । ಪಾ ದದನಿಪಾ ॥
ಮಂದ ರಾ ಚ ಲ ಬೆ ನ್ನೋ ಳಾಂತವ ನೆ
। ,,,ಪಮ ದಾದನೀಸಾ,ಸಾ । ,,ದಸಾಸರೀ । ಸಾ,,ರೀ ಸಾ ॥
ಅಚ್ಚ ಸೂಕರ ನಾ ಗಿ ಬಾ ಳಿದ ನೆ ಮದ
। ,,ದರೀಸ ಸಾಸದಾದ ಪಾಪಾ । ,,ರಿಮಾಪದಾ । ದನಿದಪಮಪಮಗ । ರಿಸಾ
ಹೆ ಚ್ಚಿ ಹಿ ರ ಣ್ಯ ಕ ನ ಸೀ ಳಿದ ನೆ

। ,,ನಿದಾನಿ ಪಾ ಪಾ,,ಪಾಪಾ । ,,ರಿಮಾಪಮಾ । ಗರೀ ಸಾ,ರೀ ॥
ಬಲಿ ಯೊಳು ದಾ ನ ವ ಬೇ ಡಿದ ನೆ ಕ್ಷಾತ್ರ
। ,,ಸನಿದಾದಾ ರಿಸರಿಸರೀ,, । ,,ಗಮಾ ಪಾ, । ಪಾಪದದಾನಿಪಾ ॥
ಕು ಲ ವ ಬಿ ಡ ದೆ ಕ್ಷಯ ಮಾ ಡಿದ ನೆ
। ,,ಪಮಾಪದಾಸಾ, ಸಾ,ಸಾ । ,,ದಸಾರಿಸಾ । ರೀ, ಸಾ,ಸಾ ।
ಜಲ ನಿಧಿ ಗೆ ಬಿ ಲ್ಲ ಹೂಡಿದ ನೆ ಕಾ ಮ
। ,,,ದ ರಿ ಸ ಸನಿದಾದಾಪಾ ಪಾ । ,,ರಿಮಾಪದಾ । ದನಿದಪಮಪಮಗ । ರಿಸಾ
ಗೊಲಿದು ಗೊಲ್ಲ ತಿ ಯೊಳು ಆ ಡಿದ ನೆ

ಮೇಲಿನಂತೆ

ಸಾಧಿಸಿ ತ್ರಿಪುರರ ಗೆಲಿದವನೆ ಪ್ರತಿ
ವಾದಿಸಿ ಹಯವೇರಿ ನಲಿದವನೆ
ಭೇದಿಸಿ ವಿಶ್ವವ ಗೆಲಿದವನೆ ಬಡ
ದಾದಿ ಕೇಶವರಾಯ ನಮಗೊಲಿದವನೆ

# ಲಾಲಿ ಪಾವನ ಚರಣ

ಲಾಲಿ ಪಾವನ ಚರಣ ಲಾಲಿ ಅಘಹರಣ
ಲಾಲಿ ವೆಂಕರರಮಣ ಲಲಿತ ಕಲ್ಯಾಣ

ವನಜಾಕ್ಷ ಮಾಧವ ವಸುದೇವ ತನಯ
ಸನಕಾದಿ ಮುನಿವಂದ್ಯ ಸಾಧುಜನಪ್ರಿಯ
ಧನಕೋಟಿ ಶತತೇಜ ಮುನಿಕಲ್ಪಭೂಜ
ಕನಕಾದಿನಿಲಯ ವೆಂಕಟರಮಣ ಜೀಯ

ಜಗದೇಕನಾಯಕ ಜಲಜದಳನೇತ್ರ
ಖಗರಾಜವಾಹನ ಕಲ್ಯಾಣಚರಿತ
ಸಗರತನಯಾರ್ಚಿತ ಸನಕಾದಿವಿನುತ
ರಘುವಂಶಕುಲತಿಲಕ ರಮಣೀಯ ಗಾತ್ರ

ನಂದಗೋಪಕುಮಾರ ನವನೀತ ಚೋರ
ಮಂದಾಕಿನೀ ಜನಕ ಮೋಹನಾಕಾರ
ಇಂದುಧರಸತಿ ವಿನುತ ವಿಶ್ವಸಂಚಾರ
ನಂದಗೋವಿಂದ ಮುಚುಕುಂದ ವಿನುತಸಾರ

ಪಕ್ಷಿವಾಹನ ವಿಷ್ಣು ಪಾಹಿ ಪರಮೇಶ
ರಕ್ಷಕೌಸ್ತುಭಭೂಷ ವೈಕುಂಠವಾಸ
ಅಕ್ಷಯ ಫಲದಾತ ಅಖಿಳ ಲೋಕೇಶ
ಲಕ್ಷಣಪರಿಪೂರ್ಣ ಲಕ್ಷ್ಮೀಪ್ರಾಣೇಶ

ನರಮೃಗ ಆಕಾರಿ ಹಿರಣ್ಯಕ ವೈರಿ
ಕರಿರಾಜ ರಕ್ಷಕ ಕಾರುಣ್ಯಮೂರ್ತಿ
ಹರಿ ಆದಿಕೇಶವ ಗುರು ಅಪ್ರಮೇಯ
ಗಿರಿಧರ ಶೇಷಗಿರಿ ವರತಿಮ್ಮರಾಯ

ರಾಗ: ಪುನ್ನಾಗವರಾಳಿ ಸ ರಿ ಗ ಮ ಪ ಮ ದ ನಿ ಸ ಸ ನಿ ದ ಮ ಪ ಗ ರಿ ಸ ಆದಿತಾಳ

। ಸಗಾರೀ, ಸಾ । ಸರೀ ಸನೀನೀ । ಸಗಾರೀ, ಸಾ । ಸರೀ ಸನೀನಿ ।
ಲಾ ಲಿ ಪಾ ವನ ಚರಣ ಲಾ ಲಿ ಅ ಘ ಹರಣ

। ರಿಗರಿರೀ, ರೀ । ಮಗಾ,ಮಗಾ,ಮಗಾ,ಮಮ । ,,ರಿಮಾಪ ಪಾ । ಪಮಮಗಗರಿಸಾ ।
ಲಾ ಲಿ ವೆಂ ಕ ಟ ರ ಮಣ ಲಲಿ ತ ಕ ಲ್ಯಾ ಣ

। ಸಾ,ಗರಿಸಸಸಾ । ನೀ,, ,,,, । ಸಾ,ಗರಿಸಸನಿ । ಸಾ,, ,,,, । ಸಾ,ಗರಿಸಸಾ । ನೀ,, ,,,, । ಗಾ,ರಿಸಾರಿನಿ । ಸಾ,, ,,,, ।
ಲಾ ಲಿ ಲಾ ಲಿ ಲಾ ಲಿ ಲಾ ಲಿ

। ಮಪಾಮರೀಮಾ । ಪಾ,,ಪಾಪಾ । ಪಪಾಪದಾಮಾ । ಪಾಪಾಪಾ,, ।
ವ ನ ಜಾ ಕ್ಷ ಮಾಧ ವ ವಸುದೇ ವ ತ ನ ಯ

। ರಿಮರಿರಿಮರಿರೀ । ರಿ ಮರಿರಿಮರಿರೀ । ,,ರಿಮಾಪ ಪಾ । ಪಮಮರಿರಿಸಸಾ ।
ಸನ ಕಾ ದಿ ಮುನಿ ವಂ ದ್ಯ ಸಾ ಧುಜ ನ ಪ್ರಿಯ

। ರಿಮಾಮಾ,ಮಾ । ರಿಮಾಮಾ,ಮಾ । ಮ ಪಾಮರೀಮಾ । ಪಾ,,ಪಾ,, ।
ಧನ ಕೋಟಿ ಶತ ತೇ ಜ ಮುನಿ ಕ ಲ್ಪ ಭೂಜ

। ಪದಾನೀ,ನೀ । ಪದಾಪಮಾ ಮಾ । ಪದಾಪಮಾಮಾ । ಪಮಮರಿಮರಿರಿಸ ।
ಕನ ಕಾದಿ ನಿಲ ಯ ವೆಂ ಕಟ ರಮ ಣ ಜೀ ಯ

ಮೇಲಿನಂತೆ ಮಿಕ್ಕ ಚರಣಗಳು

ಜಗದೇಕನಾಯಕ ಜಲಜದಳನೇತ್ರ
ಖಗರಾಜವಾಹನ ಕಲ್ಯಾಣಚರಿತ
ಸಗರತನಯಾರ್ಚಿತ ಸನಕಾದಿವಿನುತ
ರಘುವಂಶಕುಲತಿಲಕ ರಮಣೀಯ ಗಾತ್ರ

ನಂದಗೋಪಕುಮಾರ ನವನೀತ ಚೋರ
ಮಂದಾಕಿನೀ ಜನಕ ಮೋಹನಾಕಾರ
ಇಂದುಧರಸತಿ ವಿನುತ ವಿಶ್ವಸಂಚಾರ
ನಂದಗೋವಿಂದ ಮುಚುಕುಂದ ವಿನುತಸಾರ

ಪಕ್ಷಿವಾಹನ ವಿಷ್ಣು ಪಾಹಿ ಪರಮೇಶ
ರಕ್ಷಕೌಸ್ತುಭಭೂಷ ವೈಕುಂಠವಾಸ
ಅಕ್ಷಯ ಫಲದಾತ ಅಖಿಳ ಲೋಕೇಶ
ಲಕ್ಷಣಪರಿಪೂರ್ಣ ಲಕ್ಷ್ಮೀಪ್ರಾಣೇಶ

ನರಮೃಗ ಆಕಾರಿ ಹಿರಣ್ಯಕ ವೈರಿ
ಕರಿರಾಜ ರಕ್ಷಕ ಕಾರುಣ್ಯಮೂರ್ತಿ
ಹರಿ ಆದಿಕೇಶವ ಗುರು ಅಪ್ರಮೇಯ
ಗಿರಿಧರ ಶೇಷಗಿರಿ ವರತಿಮ್ಮರಾಯ

# ವನಜ ಮುಖಿಯರ ಮನದಿಷ್ಟಾರ್ಥವನೀವನ

ವನಜ ಮುಖಿಯರ ಮನದಿಷ್ಟಾರ್ಥವನೀವನ–ಶ್ರೀಕೃಷ್ಣ ಎನ್ನಿರೊ
ತನ್ನ ಮನದೊಳು ಧ್ಯಾನಿಸುವಳ ತಂದಾಗ–ಶ್ರೀಕೃಷ್ಣ ಎನ್ನಿರೊ

ಪಣ್ಣಕೊಯ್ದನನುಜಗೆ ಸಹಾಯನಾದನ–ಶ್ರೀಕೃಷ್ಣ ಎನ್ನಿರೊ
ಸಣ್ಣ ಸೀರೆಯ ನಲ್ವೆಣ್ಣು ರೂಪಾದನ–ಶ್ರೀಕೃಷ್ಣ ಎನ್ನಿರೊ
ಅಣ್ಣನ ವೈರಿಯ ಮಗನ ಕೊಂದಾತನ–ಶ್ರೀಕೃಷ್ಣ ಎನ್ನಿರೊ
ಬಣ್ಣಿಸಲರಿಯೆ ನಾನಿವನ ಮಹಿಮೆಯ–ಶ್ರೀಕೃಷ್ಣ ಎನ್ನಿರೊ

ಮುತ್ತಯ್ಯನಿರೆ ಮೊಮ್ಮಗಗೆ ಪಟ್ಟಗಟ್ಟಿದನ–ಶ್ರೀಕೃಷ್ಣ ಎನ್ನಿರೊ
ಹೆತ್ತವಳಿರೆ ತಾಯ ಬೇರೆ ಪಡೆದಾತನ–ಶ್ರೀಕೃಷ್ಣ ಎನ್ನಿರೊ
ಮತ್ತೇಭಗಾಮಿನಿಗಾಗಿ ವನವಾಸ ಪೋದನ–ಶ್ರೀಕೃಷ್ಣ ಎನ್ನಿರೊ
ಮತ್ತೆ ಹಿರಣ್ಯಕಗೆ ಕಂಬದಲಿ ತೋರ್ದನ–ಶ್ರೀಕೃಷ್ಣ ಎನ್ನಿರೊ

ಉಗುರು ಕೊನೆಗಳಿಂದ ನಗವನೆತ್ತಿದನ–ಶ್ರೀಕೃಷ್ಣ ಎನ್ನಿರೊ
ಬೊಗಸೆಗಂಗಳ ಬಾಲೆಯರ ತಂದಾತನ–ಶ್ರೀಕೃಷ್ಣ ಎನ್ನಿರೊ
ಮಗಳ ಗಂಡನ ಶಿರವನೆ ಛೇಧಿಸಿದನ–ಶ್ರೀಕೃಷ್ಣ ಎನ್ನಿರೊ
ಸುಗುಣ ತನ್ನ ಕಾಗಿನೆಲೆಯಾದಿಕೇಶವನ–ಶ್ರೀಕೃಷ್ಣ ಎನ್ನಿರೊ

**ರಾಗ ಮೋಹನ** ಸ ರಿ² ಗ³ ಪ ದ² ಸ **ಅನ್ಯ ಸ್ವರ ರಿ¹ ಗ²** **ತ್ರಿಶ್ರ ನಡೆ ಆದಿತಾಳ**

। ಸಾಸ ಸಾಸ ಸಾ,, ಸಪ । ಪಾಪ ದಾದ । ದಾ,,,, । ರೀರಿ ರೀ**ರಿ** ರೀ,, ಸರಿ । ಗಾಗ ರೀಸ । ಸಾ,,,, ।
**ಕೃಷ್ಣ ಎನ್ನಿರೊ ಶ್ರೀ ಕೃಷ್ಣ ಎನ್ನಿ ರೊ ಕೃಷ್ಣ ಎನ್ನಿರೊ ಶ್ರೀ ಕೃಷ್ಣ ಎನ್ನಿ ರೊ**

। ,,ಗಗ ಗಾ **ಗ** **ಗ** ಗ ಗ ಗ ಗ । ಗದಪದಾಪ । ಗರಿರೀ,, । ರೀರಿ ರೀ**ರಿ** ರೀ,, ಸರಿ । ಗಾಗ ರೀಸ । ಸಾ,,,, ।
**ವನಜ ಮುಖಿಯರ ಮನ ದಿ ಷ್ಟಾ ರ್ಥ ವೀವ ಕೃಷ್ಣ ಎನ್ನಿರೊ ಶ್ರೀ ಕೃಷ್ಣ ಎನ್ನಿ ರೊ**
। ,,ಗಾಗಾ **ಗ ಗಗ** ಗಾ, । ಗಾ ಪದ ಪಪ । ಗರಿರೀ ರಿರಿ । ಸಾಸ ರೀ**ರಿ** ರೀ,, ಸರಿ । ಗಾಗ ರೀಸ । ಸಾ,,,, ।
**ತ ನ್ನ ಮನದೊಳು ಧ್ಯಾನಿಸುವಳ ತಂದಾತನ ಕೃಷ್ಣ ಎನ್ನಿರೊ ಶ್ರೀ ಕೃಷ್ಣ ಎನ್ನಿ ರೊ**

। ,,ಗಪಪಾ ಗದದ ದದ ದ । ದಾ ಪಸಾ ರಿ । ಗಾಪಪಾ, ॥ ದಾದ ದಾದ ದಾ,,ದಪ । ಪಗಗ ಗದಪ । ಪಾ,,,, ।
**ಪ ಣ್ಣ ಕೊಯ್ದನನುಜ ಗೆ ಸಹಾಯ ನಾದನ ಕೃಷ್ಣ ಎ ನ್ನಿರೊ ಶ್ರೀ ಕೃ ಷ್ಣ ಎ ನ್ನಿ ರೊ**
। ಗಾಪ ದಾಪದಸದಸ ದಪ । ಗಾಗಾ ದಪ । ಗಾ ರಿರೀ, । ರೀರಿ ರೀ**ರಿ** ರೀ,, ಸರಿ । ಗಾಗ ರೀಸ । ಸಾ,,,, ।
**ಸ ಣ್ಣ ಸೀರೆಯ ನಡು ಪೆಣ್ಣು ರೂ ಪಾದನ ಕೃಷ್ಣ ಎನ್ನಿರೊ ಶ್ರೀ ಕೃಷ್ಣ ಎನ್ನಿ ರೊ**

**ಮೇಲಿನಂತೆ ಚರಣದಂತೆ**
**ಅಣ್ಣನ ವೈರಿಯ ಮಗನ ಕೊಂದಾತನ ಕೃಷ್ಣ ಎನ್ನಿರೊ ಕೃಷ್ಣ ಎನ್ನಿರೊ ಶ್ರೀ ಕೃಷ್ಣ ಎನ್ನಿ ರೊ**
**ಬಣ್ಣಿಸಲರಿಯೆ ನಾನಿವನ ಮಹಿಮೆಯ ಕೃಷ್ಣ ಎನ್ನಿರೊ ಕೃಷ್ಣ ಎನ್ನಿರೊ ಶ್ರೀ ಕೃಷ್ಣ ಎನ್ನಿ ರೊ**

। ಪಾ ಪಾ,ಪ ಪಪ ಪಾ ಪ ಪ । ಗರಿ ಸಾಸರಿ । ಗಾಪ ಪಪಾ ॥ ದಾದ ದಾದ ದಾ,,ದಪ । ಪಗಗ ಗದಪ । ಪಾ,,,, ।
**ಮುತ್ತ ಯ್ಯನಿರೆ ಮೊಮ್ಮಗ ಗೆ ಪ ಟ್ಟ ಗ ಟ್ಟಿದನ ಕೃಷ್ಣ ಎ ನ್ನಿರೊ ಶ್ರೀ ಕೃಷ್ಣ ಎ ನ್ನಿ ರೊ**
। ಗಾಪ ದಸಸ ಸದದ ದಪಪ । ದಪದಪದಪ । ಗರೀ,,, । ರೀರಿ ರೀ**ರಿ** ರೀ,, ಸರಿ । ಗಾಗ ರೀಸ । ಸಾ,,,, ।
**ಹೆತ್ತವಳಿರೆ ತಾಯ ಬೇರೆ ಪಡೆದಾ ತನ ಕೃಷ್ಣ ಎನ್ನಿರೊ ಶ್ರೀ ಕೃಷ್ಣ ಎನ್ನಿ ರೊ**

**ಮೇಲಿನ ಚರಣದಂತೆ**
**ಮತ್ತೇಭಗಾಮಿನಿಗಾಗಿ ವನವಾಸ ಪೋದನ–ಶ್ರೀಕೃಷ್ಣ ಎನ್ನಿರೊ**
**ಮತ್ತೆ ಹಿರಣ್ಯಕಗೆ ಕಂಬದಲಿ ತೋರ್ದನ–ಶ್ರೀಕೃಷ್ಣ ಎನ್ನಿರೊ**

**ಉಗುರು ಕೊನೆಗಳಿಂದ ನಗವನೆತ್ತಿದನ–ಶ್ರೀಕೃಷ್ಣ ಎನ್ನಿರೊ**
**ಬೊಗಸೆಗಂಗಳ ಬಾಲೆಯರ ತಂದಾತನ–ಶ್ರೀಕೃಷ್ಣ ಎನ್ನಿರೊ**

**ಮಗಳ ಗಂಡನ ಶಿರವನೆ ಬೇಧಿಸಿದನ–ಶ್ರೀಕೃಷ್ಣ ಎನ್ನಿರೊ**
**ಸುಗುಣ ತನ್ನ ಕಾಗಿನೆಲೆಯಾದಿಕೇಶವನ–ಶ್ರೀಕೃಷ್ಣ ಎನ್ನಿರೊ**

## ವರಕವಿಗಳ ಮುಂದೆ

ವರಕವಿಗಳ ಮುಂದೆ ನರಕವಿಗಳ ವಿದ್ಯೆ ತೋರಬಾರದು
ಧರಣಿಯ ಕಲ್ಲಿಗೆ ಶರಣೆಂದು ಪೂಜೆಯ ಮಾಡಬಾರದು

ಪಾಪಿಗಳಿದ್ದಲ್ಲಿ ರೂಪುಳ್ಳ ವಸ್ತುವ ತೋರಬಾರದು–ಬಹು
ಕೋಪಿಗಳಿದ್ದಲ್ಲಿ ಅನುಭವಗೋಷ್ಠಿಯ ಮಾಡಬಾರದು

ಅಡಿ ಸತ್ತ ಮಡಕೆಗೆ ಜೋಡಿಸಿ ಒಲೆಗುಂಡು ಹೂಡಬಾರದು–ಬಹು
ಬಡತನ ಬಂದಾಗ ನೆಂಟರ ಬಾಗಿಲ ಸೇರಬಾರದು

ಹರಿಯ ನಿಂದಿಸಿ ಹರ ಘನನೆಂದು ನರಕಕ್ಕೆ ಬೀಳಬಾರದು–ತಾ
ಪರರನು ಬೈದು ಪಾತಕಕೆ ಮುನ್ನೊಳಗಾಗಬಾರದು

ಮಡದಿ ನುಡಿಯ ಕೇಳಿ ಜಗಳಕೊಬ್ಬರ ಕೂಡೆ ಹೋಗಬಾರದು–ಬಾ
ಯ್ಬಡಿಕರು ಇದ್ದಲ್ಲಿ ವಸ್ತಿ ಬಿಡಾರವ ಮಾಡಬಾರದು

ಮುಂದೆ ಭಲಾ ಎಂದು ಹಿಂದೆ ನಿಂದಿಪರನ್ನು ಕೂಡಬಾರದು–ನಮ್ಮ
ತಂದೆ ಬಾಡದಾದಿಕೇಶವನ ಸ್ಮರಣೆಯ ಬಿಡಬಾರದು

**ರಾಗ:ಬಿಲಹರಿ** ಸ ರಿ ಗ ಪ ದ ಸ ಸ ನಿ ದ ಪ ಮ ಗ ರಿ ಸ **ಅನ್ಯ ಸ್ವರ ದ** **ರೂಪಕ ತಾಳ**

। ಸ ಸಸಾಸಾಸಸ ಸಾ ಸಾ । ನಿರೀಗರೀನಿದ ಪಾಪಾ । ಗಪನೀದಾಪಮಗಾಮಾ । ಪಾ;;;;; ।
**ವರಕ ವಿ ಗಳ ಮುಂದೆ ನರ ಕವಿ ಗಳ ವಿ ದ್ಯೆ ಮಾ ಡ ಬಾ ರ ದು**

। ಮಮಮಾಮಾ ಪದದಾದಪ । ಪದಪನಿದಪ ಮಗಾರಿಸರಿ । ಪಾ ಮ<u>ರೀಗರಿಸರಿಗಾ</u>ರಿಸ । ಸಾ;;;;; ।
**ಧ ರ ಣಿ ಯ ಕ ಲ್ಲಿಗೆ ಶರ ಣೆಂ ದು ಪೂ ಜೆ ಯ ಮಾಡ ಬಾ ರ ದು**

। ಸಾ ಸಾಸಾಸಾಸಾಸಾ । ಸಾರಿಗಸಾ ನೀದಾಪಾ । ಪದನೀದಾಪಮಗಾಮಾ । ಪಾ;;;; ಗಮ ।
**ಪಾಪಿ ಗ ಳಿ ದ್ದಲ್ಲಿ ರೂಪುಳ್ಳ ವ ಸ್ತುವ ತೋ ರ ಬಾ ರ ದು ಬಹು**

। ದಾ ದಾದಾದಾದಾದಾ । ಪದ<u>ಪನೀ,ದಪಾ,</u> ಮಗಾರಿಸರಿ । ಪಾ ಮ<u>ರೀಗರಿಸರಿಗಾ</u>ರಿಸ । ಸಾ;;;;; ।
**ಕೋಪಿ ಗ ಳಿ ದ್ದಲ್ಲಿ ಅ ನು ಭವ ಗೋ ಷ್ಠಿ ಯ ಮಾಡ ಬಾ ರ ದು**

। ದದ ಸಾಸಾ ರಿ ರಿರೀರೀ । ಸರಿ ರೀರೀ ಸರಿ ರೀ ರೀ । ,,ನೀ, ಸದದದಾನೀ । ಸಾ;;;ಪಪ ।
**ಅಡಿ ಸ ತ್ತ ಮಡಕೆ ಗೆ ಜೋಡಿ ಸಿ ಒಲೆಗುಂಡು ಹೂಡಬಾ ರ ದು ಬಹು**

। ದಸ ಸಾಸಾ ರಿಗಗಾ ರೀ । ,,ಸಗ ರಿಸ ನಿದಾಪದಾ । ರೀ,,ರೀಸಗರೀಸಾ । ಸನಿದನಿದಪದಪಗಪದನಿ ।
**ಬಡತ ನ ಬಂದಾಗ ನೆಂಟರ ಬಾ ಗಿಲ ಸೇ ರ ಬಾ ರ ದು**

**ಮೇಲಿನಂತೆ**

**ಮಡದಿ ನುಡಿಯ ಕೇಳಿ ಜಗಳಕೊಬ್ಬರ ಕೂಡೆ ಹೋಗಬಾರದು–ಬಾಯ**
**ಬಡಿಕರು ಇದ್ದಲ್ಲಿ ವಸ್ತಿ ಬಿಡಾರವ ಮಾಡಬಾರದು**

**ಮುಂದೆ ಭಲಾ ಎಂದು ಹಿಂದೆ ನಿಂದಿಪರನ್ನು ಕೂಡಬಾರದು–ನಮ್ಮ**
**ತಂದೆ ಬಾಡದಾದಿಕೇಶವನ ಸ್ಮರಣೆಯ ಬಿಡಬಾರದು**

## ವರವ ಕೊಡು ಎನಗೆ ವಾಗ್ದೇವಿ

ವರವ ಕೊಡು ಎನಗೆ ವಾಗ್ದೇವಿ – ನಿಮ್ಮ
ಚರಣ ಕಮಲಂಗಳ ದಯಮಾಡು ದೇವಿ

ಶಶಿ ಮುಖದ ನಸುನಗೆಯ ಬಾಲೆ
ಎಸೆವ ಕರ್ಣದ ಮುತ್ತಿನೋಲೆ
ನಸುನಗುವ ಸುಪಲ್ಲ ಗುಣಶೀಲೆ – ದೇವಿ
ಬಿಸಜಾಕ್ಷಿ ಎನ್ನ ಹೃದಯದೊಳು ನಿಂದವಳೆ

ಇಂಪು ಸೊಂಪಿನ ಚಂದ್ರಬಿಂಬೆ
ಕೆಂಪು ತುಟಿಗಳ ನಾಸಿಕದ ರಂಭೆ
ಜೊಂಪು ಮದನನ ಪೂರ್ಣಶಕ್ತಿ ಬೊಂಬೆ – ಒಳ್ಳೆ
ಸಂಪಗೆ ಮುಡಿಗಿಟ್ಟು ರಾಜಿಪ ಶಾರದಾಂಬೆ

ರವಿಕೋಟಿ ತೇಜಪ್ರಕಾಶೆ – ಮಹಾ
ಕವಿ ಜನರ ಹೃತ್ಕಮಲವಾಸೆ
ಅವಿರಳ ಪುರಿ ಕಾಗಿನೆಲೆಯಾದಿಕೇ
ಶವನ ಸುತನಿಗೆ ಸನ್ನುತ ರಾಣಿವಾಸೆ

ರಾಗ: ರಂಜನಿ ಸ ರಿ ಗ ಮ ದ ಸ ಸ ನಿ ದ ಮ ಗ ಸ ರಿ ಸ ಆದಿತಾಳ

। ,,ಸನೀದ ಮಾಗಾ, ರಿಗಾಸಾ । ,,ಸದಾಸ ಸಾ । ರೀ,, ರಿಗರೀ ॥
**ವರವ ಕೊಡು ಎನಗೆ ವಾ ಗ್ದೇವಿ ನಿ ಮ್ಮ**

। ,,ರಿಗಾಮ ದಾಸಾದಾ,ಸಸಾ । ,,ಸನೀ ದಾ ಮ । ಸನಿದಮಗಮದನಿ ॥ ಸಗ
**ಚರ ಣ ಕ ಮಲಂಗಳ ದಯಮಾಡು ದೇ ವಿ**

। ,,ದದಾದ ದಾದಾ,,ಸನಿದಾ । ಮಾಗಾಸಾ,, । ರೀ,ಗಮಾದಾ ॥
**ಶಶಿ ಮುಖ ದ ನ ಸು ನ ಗೆ ಯ ಬಾ ಲೆ**

। ,,ರಿಗಾಸಾ, ಸನಿದಾಸಾ ರೀ । ,,ಸರೀಗಮಾ । ದಾಸನಿದಾದಾ ॥
**ಎಸೆವ ಕ ರ್ಣದ ಮುತ್ತಿನ ಓ ಲೆ**

। ,,ದಸಾಮಾ ದ ಸಾ,,ಸಾ,, । ,,ದ ಸಾರಿಗಾ । ಸಾ, ಸದಾಸಾ(ಸರಿ) ।
**ನಗು ವ ಸುಪ ಲ್ಲ ಗುಣ ಶೀ ಲೆ ದೇ ವಿ (ವಿ)**

। ,,ಗಮಾಗಾಸಾ ಸನಿದಮದಮದಾ । ,,ಸ ನೀದ ಮಾ । ಸನಿದಮಗಮದನಿ । ಸಗ
**ಬಿಸ ಜಾಕ್ಷಿ ಎ ನ್ನ ಹೃದಯದೊ ಳು ನಿಂ ದು**

। ,,ರಿಗಾ ಸಾ ಸ ಸನಿದಾಸಾ ಸ । ರೀ,,ರೀ,, । ,,,ಮರೀ,, ।
**ರವಿ ಕೋಟಿ ತೇ ಜ ಪ್ರ ಕಾ ಶ ಮಹಾ**

। ,,ರಿಗಾಮದಾ ದಾ,ಸದಮದಾ । ರೀ,,ಸಾ,, । ,,,, ,,,, ।
**ಕವಿ ಜನ ಹೃ ತ್ಕಮ ಲ ವಾ ಸೆ**

। ,,ದಾಸಸದಮದಾಸಾಸಾ,, । ,,ದಾಸರಿರೀ । ಸನಿದಾಸಾರೀ ।
**ಅ ವಿರ ಳ ಪುರಿ ಕಾಗಿನೆಲೆ ಯಾ ದಿ ಕೇ**

। ಗಮಾಗಾ, ಗ ಸದಮಾದಾ, ಸಾ । ಸ ನೀ ದಮಾದಾ । ಸನಿದಮಗಮದನಿ । ಸಗ
**ಶವ ನ ಸುತನಿ ಗೆ ಸ ನ್ನುತ ರಾ ಣಿ ವಾ ಸೆ**

# ಸಜ್ಜನರ ಸಂಗದೊಳು

ಸಜ್ಜನರ ಸಂಗದೊಳು ಇರಿಸೆನ್ನ ರಂಗ
ದುರ್ಜನರ ಸಂಗ ನಾನೊಲ್ಲೆ ಮಂಗಳಾಂಗ

ಕೂಡಿದ ಸಭೆಯಲ್ಲಿ ಕುತ್ಸಿತವನು ಈವನ ಸಂಗ
ನಾಡಿನೊಳಗನ್ಯಾಯ ಮಾಡುವನ ಸಂಗ
ಬೇಡಿದರು ಕೊಡದಿರುವ ಕಡುಲೋಭಿಯ ಸಂಗ
ಮೂಢಮೂರ್ಖರ ಸಂಗ ಬಲು ಭಂಗ ಎಲೊ ರಂಗ

ಗುರುಸತಿಗೆ ಪರಸತಿಗೆ ಎರಡು ಬಗೆವರ ಸಂಗ
ಗುರುನಿಂದೆ ಪರನಿಂದೆ ಮಾಡುವರ ಸಂಗ
ಪರಹಿತಾರ್ಥದ ಧರ್ಮ ಅರಿಯದವರ ಸಂಗ
ಮರುಳು ಪಾಮರ ಸಂಗ ಬಲು ಭಂಗ ಎಲೊ ರಂಗ

ಆಗಮದ ಅನ್ವಯವ ಅರಿಯದವನ ಸಂಗ
ರೋಗದಲಿ ಆವಾಗ ಮುಲುಗುವನ ಸಂಗ
ಕಾಗಿನೆಲೆ ಆದಿಕೇಶವನಂಘ್ರಿ ನೆನೆಯದಿಹ
ಭಾಗವತರ ಸಂಗ ಬಲು ಭಂಗ ಎಲೊ ರಂಗ

ರಾಗ: ಕಲ್ಯಾಣವಸಂತ ಸ ಗ ಮ ದ ನಿ ಸ ಸ ನಿ ದ ಪ ಮ ಗ ರಿ ಸ ಆದಿತಾಳ

। ,,,ಮಾಮಮಮಾಮಾ । ಗರಿಮಗಗರಿ ರಿಸಸಾ । ,,ನಿಸಾನಿದಾನೀ । ಸಾಸಾ, ।
ಸ ಜ್ಜ ನ ರ ಸಂಗ ದೊಳ ಗೆ ಇರಿಸೆ ನ್ನ ರಂಗ
। ,,,ಸಾ ಗ ಮಾದಾ । ದನಿಸನಿದಾ, ಗಮಾ । ದನಿಸಾ,ಸಾ ಸನಿಸ । ದನಿದಮದಮಗಮದನಿ । ಸಾ,
ದುರ್ಜನ ರ ಸಂ ಗ ನಾ ನೊ ಲ್ಲೆ ಮಂ ಗ ಳಾಂ ಗ

। ,,,ಮಾಮಮಾ,, । ಗರಿಮಗಗರಿರಿಸಸಾ । ಸಾ,ನಿ ಸಾನಿದಾ, । ದನಿಸಾನೀ ಸಾ । ಸ
ಕೂಡಿ ದ ಸ ಭೆ ಯ ಲ್ಲಿ ಕು ತ್ಸಿತ ವನು ಈ ವನ ಸಂ ಗ
। ,,,ಸಾಸ ಗಾ ಗಾ । ಮಾ,,ಮಾ,,ಮಗಗಾ । ,,ಗಮಾದಾಪಮಗಾ । ಪಾದಪಪಾದಪಮಾಪಮ ।
ನಾಡಿನೊಳ ಗ ನ್ಯಾ ಯ ಮಾ ಡುವ ನ ಸಂ ಗ
। ,,,ಗಾಮದಾದಾ । ನೀ ನೀಸನಿರಿಸನಿದ । ,,ಗಮಾದನೀ ನೀ । ಸಾ,,ಸಾಗಸಸಾ ।
ಬೇಡಿ ದ ರು ಕೊಡ ದಿ ರು ವ ಕಡು ಲೋಭಿ ಯ ಸಂ ಗ
। ,,,ನೀ ಸರೀ,, । ಸನಿ ರಿಸ ಸನಿನಿದದಾ । ,,ಗಮಾ ಗರೀಸಾ । ಗಸಮಗ ದಮನಿದಸನಿ । ಗರಿ,
ಮೂಢಮೂ ರ್ಖರ ಸಂ ಗ ಬಲು ಭಂಗ ಎ ಲೊ ರಂ ಗ

। ,,ಮಮಾಮಮಾಮಾ । ಗಸಮಗಗರಿರಿಸಸಾ । ,,ನಿಸಾನಿ ನಿದದಾ । ನೀನೀ ಸಾ,,ಸಾ ।
ಗುರು ಸ ತಿ ಗೆ ಪ ರ ಸ ತಿ ಗೆ ಎರಡು ಬ ಗೆ ವ ರ ಸಂ ಗ
। ,,ಸ ಸಾಗಾ,ಮಾ । ಗಾಮಾದನಿಸನಿದಾ । ,,ಪಾ, ಮಗಾಗಾ । ಗಾಪಮಮಾಮಪಗಾ ।
ಗುರುನಿಂದೆ ಪ ರ ನಿಂ ದೆ ಮಾಡುವರ ಸಂ ಗ
। ,,ಮಗಾಮದಾ,, । ನೀಸನಿದನಿ ಸಾ,,ಸಾ । ,,ನಿದಾನಿ ಸಾಮಗ । ಗರಿಸರಿ ರಿಸಸಾಸಾ ।
ಪ ರಹಿ ತಾ ರ್ಥ ದ ಧ ರ್ಮ ಅರಿ ಯದ ವ ರ ಸಂ ಗ
। ,,ಸ ಗಾರಿ ಸಾ,, । ಸನಿರಿಸ ಸನಿನಿದದಾ । ,,ಗಮಾ ಗರೀಸಾ । ಗಸಮಗ ದಮನಿದಸನಿ । ಗರಿ,
ಮರುಳು ಪಾ ಮರ ಸಂ ಗ ಬಲು ಭಂಗ ಎ ಲೊ ರಂ ಗ

। ,,,ಸಾಗಮಾದಾ । ಗಮದನಿಸನಿದಮಗರಿ । ಸಾಸನೀಸ ದಾನೀ । ಸಾ,,ಸಾಗಸಸಾ ।
ಆ ಗಮ ದ ಅ ನ್ವಯ ವ ನರಿ ಯದ ವ ನ ಸಂ ಗ
। ,,,ಸನಿ ಸಗಾಗಾ । ಮಾ,,ಮಾ,,ಮಾಪಮ । ಗಾಗ ಮಾದ ಪಮಗಾ । ಗಾಪಮಮಾಮಾ,, ।
ರೋಗದ ಲಿ ಆ ವಾ ಗ ಮುಲು ಗುವ ನ ಸಂ ಗ
। ,,,ಗಾಮದಾದಾ । ಸನಿದನಿಸನಿಸಾ,, । ದಾನೀಸಾಗಾಗಾ । ಗರಿಸರಿಸಾ ಸಾಸಾ ।।
ಕಾಗಿ ನೆ ಲೆ ಯಾ ದಿ ಕೇ ಶ ವ ನಂ ಘ್ರಿ ನೆ ನೆ ಯದಿ ಹ
। ,,,ನೀ ಸಮಗಾಗಾ । ಗರಿಸರಿ ಸನಿರಿಸನಿದ । ,,ದಮಾ ಗರೀಸಾ । ಗಸಮಗ ದಮನಿದಸನಿ । ಗರಿ,
ಭಾಗವ ತ ರ ಸಂ ಗ ಬಲು ಭಂಗ ಎ ಲೊ ರಂ ಗ

# ಸತ್ಯವಂತರ ಸಂಗವಿರಲು

ಸತ್ಯವಂತರ ಸಂಗವಿರಲು ತೀರ್ಥವ್ಯಾತಕೆ
ನಿತ್ಯ ಅನ್ನದಾನ್ವಿರಲು ಭಯವು ಯಾತಕೆ

ತಾನು ಉಣ್ಣದಪರರಿಗಿಕ್ಕದ ಧನವಿದ್ಯಾತಕೆ
ಮಾನಿನಿಯು ತೊರೆದ ಮೇಲೆ ಭೋಗವ್ಯಾತಕೆ
ಜ್ಞಾನವಿಲ್ಲದೆ ನೂರುಕಾಲ ಬದುಕಲ್ಯಾತಕೆ
ಮಾನಹೀನನಾಗಿ ಬಾಳ್ವ ಮನುಜನ್ಯಾತಕೆ

ಮಾತು ಕೇಳದೆ ಮಲೆತು ನಡೆವ ಮಕ್ಕಳ್ಯಾತಕೆ
ಪ್ರೀತಿಯಿಲ್ಲದೆ ಎಡೆಯಲಿಕ್ಕಿದ ಅನ್ನವ್ಯಾತಕೆ
ನೀತಿಯರಿತು ನಡೆಯದಿರುವ ಬಂಟನ್ಯಾತಕೆ
ಸೋತ ಹೆಣ್ಣಿಗೆ ಓತು ನಡೆಯದಪುರುಷನ್ಯಾತಕೆ

ಸನ್ನೆಯರಿತು ನಡೆಯದಿರುವ ಸತಿ ಇನ್ಯಾತಕೆ
ಮನ್ನಣೆಂದ ನಡೆಸದಿರುವ ದೊರೆ ಇನ್ಯಾತಕೆ
ಮುನ್ನ ಕೊಟ್ಟು ಪಡೆಯದಿನ್ನು ಬಯಸಲ್ಯಾತಕೆ–ಪ್ರ
ಸನ್ನ ಆದಿಕೇಶವನಲ್ಲದೆ ದೈವವ್ಯಾತಕೆ

**ರಾಗ: ಪಂತುವರಾಳಿ** ಸ ರಿ^ ಗ~ ಮ~ ಪ ದ^ ನಿ~ ಸ **ತ್ರಿಪುಟ ತಾಳ**

। ಪಾದಪಾ ಪಮ । ಗಾಮಗ ರಿಮಗ । ಸಪಮ ಗರಿಗರಿ । ಸಾ, ,,,, ।

**ಸ ತ್ಯವಂತರ ಸಂಗ ವಿರಲು ತೀ ರ್ಥವ್ಯಾ ತ ಕೆ**

। ಗಾಗ ಮಾದಾ । ನೀ ನಿಸ ಸಸಾ । ಸ ಸ ನಿ ಪಾ ಮ । ಗರಿಗಮಪದಪದಪಮಗರಿಗಮ ।

**ನಿ ತ್ಯ ಅ ನ್ನ ದಾನವಿರಲು ಭಯವು ಯಾತ ಕೆ**

। ಪಾದ ಪಾಪ ಮ । ಪಪದಪಾಪಮ । ಗಮರಿ ಗಮಪದ । ಪಾ, ,,,, ।।

**ತಾನು ಉಣ್ಣದೆ ಪರರಿ ಗಿ ಕ್ಕದ ಧನವಿದ್ಯಾ ತ ಕೆ**

। ಮಾನಿದಾನೀ । ಸಾ ಸನಿದಾ ಪಾ ಪಾ । ಪಾ ಮಗಮಗಮಗಾರೀ । ಸಾ, ,,,, ।।

**ಮಾನಿನಿ ಯ ತೊರೆ ದ ಮೇಲೆ ಭೋಗ ವ್ಯಾ ತ ಕೆ**

। ಮಾನಿದಮದ ನಿ । ಸಾ ನಿ ಸಗರೀಸಾ । ಸ ಸ ರಿಸನಿಪದ । ದಸನಿಸನಿಸನಿಸನಿಸನಿಸನೀ ।

**ಜ್ಞಾನವಿ ಲ್ಲದೆ ನೂರುಕಾ ಲ ಬದುಕಲ್ಯಾ ತ ಕೆ**

। ದಾದಾಗರಿಸಾ,ನಿ । ದನಿದಸನೀ ದಪಪಾ । ಮಮನಿದಪಪಮ । ಮಪಮಗರಿಮಗ ।

**ಮಾ ನ ಹೀನ ನಾ ಗಿ ಬಾ ಳ್ವ ಮನುಜ ನ್ಯಾತ ಕೆ**

। ಮಾಪ ರಿಪಮಾಗಾರೀ । ಪ ಮಪ ರಿಪಮಾಗಾರೀ । ಸಾ ರಿ ಸನಿನಿರಿ । ರಿಗಾ,,,, ।

**ಮಾತು ಕೇ ಳ ದೆ ಮಲೆ ತು ನ ಡೆ ವ ಮಕ್ಕಳ್ಯಾತ ಕೆ**

। ಪಾ ದಪಾಪ ಮ । ಪಪದ ಪಾಪಮ । ಗಮಗಮರೀಗಮಪದ । ಪಾ,,,,,, ।

**ಪ್ರೀತಿಯಿಲ್ಲದೆ ಎಡೆಯಲಿ ಕ್ಕದ ಅ ನ್ನವ್ಯಾ ತ ಕೆ**

। ನೀನಿದಮಮಾಮಾ । ನಿನಿ ನಿ ದಮಗಾಗಾ । ಗಮಗಮಾ,ದ । ನೀ, ,,,, ।

**ನೀತಿಯ ರಿ ತು ನಡೆಯದಿ ರುವ ಬಂ ಟನ್ಯಾ ತ ಕೆ**

। ಸಾ, ರಿಗರಿ ಸಾಸ ನಿ । ದನಿದಸನೀ ದಪಪಾ । ಗ ಗ ನಿಪಾ,ಮ । ಗರಿಗಮಪಮಪದಪಮಗರಿಗಮ ।

**ಸೋತು ಹೆಣ್ಣಿಗೆ ಬೆ ದ ರಿ ನಡೆವ ಪುರುಷನ್ಯಾತ ಕೆ**

। ಪಾದಪ ಪಪಮ । ಪಪದ ಪಪ ಪಮ । ಗಮರಿಗಮಪದ । ಪಾ, ,,,, ।

**ಸ ನ್ನೆಯರಿತು ನಡೆಯದಿರುವ ಸತಿ ಯಿನ್ಯಾ ತ ಕೆ**

। ಮಾನಿ ದಾ ನೀ । ನಿಸನಿದಪ ಪಾ । ಪ ಪ ಮಗಮಗರಿ । ಸಾ, ,,,, ।

**ಮ ನ್ನಣೆಂದ ನಡೆಸದಿರುವ ದೊರೆ ಇ ದ್ಯಾ ತ ಕೆ**

। ಮಾನಿ ದಮದಾ । ಸ ಸನಿ ಗರಿಸಾ । ಸಸ ರಿಸನಿಮದ । ದನಿದನೀ, ಸ ।

**ಮುನ್ನ ಕೊ ಟ್ಟು ಪಡೆಯದಿ ನ್ನು ಬಯಸಲ್ಯಾ ತ ಕೆ ಪ್ರ**

। ಸಾ,ಗರೀ ಸಾಸನಿ । ಮಾ,ನಿದಾಪಾಪ ಮ । ಗಾ,ನಿದಾಪಾ,ಮ । ಮಮದಾಮಾಗಗರಿರಿಗಮ ।

**ಸ ನ್ನ ಆ ದಿ ಕೇ ಶವ ನ ಲ್ಲದೆ ದೈವ ವ್ಯಾತ ಕೆ**

# ಶಿವ ಶಿವ ಶಿವ ಎನ್ನಿರೋ

ಶಿವ ಶಿವ ಶಿವ ಎನ್ನಿರೋ ಮೂಜಗದವರೆಲ್ಲ
ಶಿವ ಶಿವ ಶಿವ ಎನ್ನಿರೋ

ಆಗಮ ಸಿದ್ಧಾಂತ ಮೂಲದ ಜಪವಿದು ಶಿವ ಶಿವ ಶಿವಶಿವ–ನಿಮ್ಮ
ರೋಗದ ಮೂಲಲವ ಕೆಡಿಪ ಔಷಧವಿದು ಶಿವ ಶಿವ ಶಿವ

ಮನುಜ ಜನ್ಮದಿ ಮೈಮರೆದಿರಬೇಡಿ ಶಿವ ಶಿವ ಶಿವ ಶಿವ
ತನುಮನ ಪ್ರಾಣವ ವ್ಯರ್ಥವ ಮಾಡದೆ ಶಿವ ಶಿವ ಶಿವ ಶಿವ
ಅಪರಾಧ ಕೋಟಿ ತ್ಯಜಿಸಬೇಕಾದರೆ ಶಿವ ಶಿವ ಶಿವ–ಮುಂದೆ
ಉಪಮಿತರೋರ್ಮಿತರರಿಯದ ಜಪವಿದು ಶಿವ ಶಿವ ಶಿವ ಶಿವ

ಜವನ ಬಾಧೆಯ ನೀವು ಜಯಿಸಬೇಕಾದರೆ ಶಿವ ಶಿವ ಶಿವ ಶಿವ ಶಿವ
ಸುವಿಮಲ ಮುಕ್ತಿಯ ಪಡೆಯಬೇಕಾದರೆ ಶಿವ ಶಿವ ಶಿವ
ಭುವನಕೆ ಬಲ್ಲಿದರಾಗಬೇಕಾದರೆ ಶಿವ ಶಿವ ಶಿವ ಶಿವ
ಭುವನ ಪದವಿಯನು ಪಡೆಯಬೇಕಾದರೆ ಶಿವ ಶಿವ ಶಿವ ಶಿವ

ಗುರುಲಿಂಗ ಜಂಗಮವ ಅರಿಯಬೇಕಾದರೆ ಶಿವ ಶಿವ ಶಿವ ಶಿವ
ಪರಮಾತ್ಮನ ನೀವು ತಿಳಿಯಬೇಕಾದರೆ ಶಿವ ಶಿವ ಶಿವ
ಪೃಥ್ವಿಗೆ ಸದ್ಗುರು ಆಗಬೇಕಾದರೆ ಶಿವ ಶಿವ ಶಿವ ಶಿವ ಶಿವ
ಆದಿಕೇಶವನ ಕೂಡಬೇಕಾದರೆ ಶಿವ ಶಿವ ಶಿವ

ರಾಗ: ಮಾಯಾಮಾಳವಗೌಳ ಸ ರಿ ಗ ಮ ಪ ದ ನಿ ಸ ಆದಿತಾಳ

। ಸಸ ಸಸ ಸಸ ಸರಿ ದಾ;;; । ಪನಿ ದಪಮಗಸರಿ । ಸಸ ಸರಿ ಗಗ ರಿಸ । ಸಾ;;; ॥
**ಶಿವ ಶಿವ ಶಿವ ಎನ್ನಿರೋ ಮೂಜಗದ ವರೆಲ್ಲ ಶಿವ ಶಿವ ಶಿವ ಎನ್ನಿ ರೋ**

। ಪಾಪದ ಪಪಾ ಗ ಪಾ ಪದ ಪಪಪಪ । ದಪಾ ದಪಾ ಗಮ । ದಪಾ, ,,ಗಮ ॥
**ಆ ಗಮ ಸಿದ್ಧಾಂತ ಮೂಲದ ಜಪವಿದು ಶಿವ ಶಿವ ಶಿವ ಶಿವ ನಿಮ್ಮ**
। ಪನಿ ನಿನಿ ನೀ ನಿದ ನಿನಿನಿ ಸನಿನಿನಿನಿ । ಸಸಾ ರಿಗಾ ರಿಸ । ರಿಸಾ, ,,,, ॥
**ರೋಗದ ಮೂಲವ ಕೆಡಿಪ ಔಷಧವಿದು ಶಿವ ಶಿವ ಶಿವ ಶಿವಾ**
। ಸಸಾ ನಿದಾ ಮಪ ನಿದಾ, ,,,, । ಪಪಾ ಮಗರಿ ಮಗ ರಿಸಾ, ,,,, ॥
**ಶಿವ ಶಿವ ಶಿ ವ ಶಿವಾ ಶಿವ ಶಿ ವ ಶಿವ ಶಿವಾ**

। ಪಪಪ ದಾಪಪಗ ಪಾಪದಪಪಾಪಾ,ಪಾ । ಪಪಾ ದಪಾ ಪಪ । ದಪಾ, ,,,, ॥
**ಮನುಜ ಜನ್ಮದಿ ಮೈಮರೆದಿರಬೇಡಿ ಶಿವ ಶಿವ ಶಿವ ಶಿವ**
। ಪದದ ದ ದಾ ದದ ದಾದ ದ ದಾ ದದ । ಪದ ಪದ ಪದ ಪಮ । ಪಪನಿದಾ,,, ॥
**ತನುಮನ ಪ್ರಾಣವ ವ್ಯರ್ಥವ ಮಾಡದೆ ಶಿವ ಶಿವ ಶಿವ ಶಿವ ಶಿವ**
। ಪಪದನಿನಿನಿ ನಿ ನಿ ನಿ ನಿ ನಿ ಸ ನೀ ನಿನಿ । ಸನೀ ಸನೀ ಸನಿ । ಸನೀ,,,ಪ ದ ॥
**ಅಪರಾಧದ ಕೋಟಿ ತ್ಯಜಿಸಬೇಕಾದರೆ ಶಿವ ಶಿವ ಶಿವ ಶಿವ ಮುಂದೆ**
। ಪ ಪಪ ದಸಾ ಸ ಸಸಸರಿ ಗ ರಿ ಸ ಸಸ । ನಿಸ ನಿಸ ನಿಸ ನಿಸ । ದಸಾ, ,,,, ॥
**ಉಪಮಿತರೋರ್ಮಿತರರಿಯದ ಜಪವಿದು ಶಿವ ಶಿವ ಶಿವ ಶಿವ ಶಿವ**

**ಮೇಲಿನಂತೆ।**
**ಜವನ ಬಾಧೆಯ ನೀವು ಜಯಿಸಬೇಕಾದರೆ ಶಿವ ಶಿವ ಶಿವ ಶಿವ ಶಿವ**
**ಸುವಿಮಲ ಮುಕ್ತಿಯ ಪಡೆಯಬೇಕಾದರೆ ಶಿವ ಶಿವ ಶಿವ**
**ಭುವನಕೆ ಬಲ್ಲಿದರಾಗಬೇಕಾದರೆ ಶಿವ ಶಿವ ಶಿವ ಶಿವ**
**ಭುವನ ಪದವಿಯನು ಪಡೆಯಬೇಕಾದರೆ ಶಿವ ಶಿವ ಶಿವ ಶಿವ**

**ಗುರುಲಿಂಗ ಜಂಗಮವ ಅರಿಯಬೇಕಾದರೆ ಶಿವ ಶಿವ ಶಿವ ಶಿವ**
**ಪರಮಾತ್ಮನ ನೀವು ತಿಳಿಯಬೇಕಾದರೆ ಶಿವ ಶಿವ ಶಿವ**
**ಪೃಥ್ವಿಗೆ ಸದ್ಗುರು ಆಗಬೇಕಾದರೆ ಶಿವ ಶಿವ ಶಿವ ಶಿವ**
। ಸಾಸರಿ ಸಸಸಾ ಸಾ ಸರಿ ಸಾಸಸ । ರಿಗಾಸ ರಿಗಾಸ । ರಿಗಾ, ,,,, ॥
**ಆದಿಕೇಶವನ ಕೂಡಬೇಕಾದರೆ ಶಿವ ಶಿವ ಶಿವ**

# ಹಣ್ಣು ಕೊಂಬುವ ಬನ್ನಿರಿ

ಹಣ್ಣು ಕೊಂಬುವ ಬನ್ನಿರಿ–ಹರಿದಾಸರು
ಚೆನ್ನ ಬಾಲಕೃಷ್ಣನೆಂಬ ಕನ್ನೆಗೊನೆ ಬಾಳೆಹಣ್ಣು

ಸುತ್ತೇಳು ಲೋಕದಿ ಸುರರು ಬಿತ್ತಿದ ಹಣ್ಣು
ಭಕ್ತರ ಬಾಯೊಳು  ನೆನೆವ ಹಣ್ಣು
ಅರ್ತಿಯುಳ್ಳವರೆಲ್ಲ ಕೊಳ್ಳಿ ಬೇಕಾದರೆ
ನಿತ್ಯ ಮಾಧವನೆಂಬ ಅಚ್ಚ ಮಾವಿನ ಹಣ್ಣು

ಅಹನ ಪಡೆದ ಹಣ್ಣು ಗಜವ ಕಾಯ್ದ ಹಣ್ಣು
ನಿಜಮುನಿಗಳಿಗೆ ತೋರಿಸಿದ ಹಣ್ಣು
ತ್ರಿಜಗವಂದಿತ ಪಾಲ್ಗಡಲೊಡೆಯ ಹಣ್ಣು ಸುಜನ
ಭಕ್ತರೆಲ್ಲ ಕೊಳ್ಳ ಬನ್ನಿರಿ ಹಣ್ಣು

ತುರುವ ಕಾಯ್ದ ಹಣ್ಣು ಉರಗನ ತುಳಿದ ಹಣ್ಣು
ಕರೆದರೆ ಕಂಭದೊಳು ಓ ಎಂಬ ಹಣ್ಣು
ಮರುಗುವ ಧ್ರುವನಿಗೆ ಪಟ್ಟಗಟ್ಟಿದ ಹಣ್ಣು
ಕರುಣಾಳು ಕಾಗಿನೆಲೆಯಾದಿಕೇಶವ ಹಣ್ಣು

ರಾಗ: ಯಮುನಾಕಲ್ಯಾಣಿ ಸ ರಿ² ಗ³ ಮ² ಪ ದ² ನಿ³ ಸ + ಮ¹ ಆದಿತಾಳ

। ,,,ಪಾದ ಸಾ ಸ ಸಾ ಗರೀಸಾ । ಸಾ,,,,ಸ ರಿ । ಗಪಾಪಗರಿಸರಿ ॥
ಹ ಣ್ಣು ಕೊಂಬುವ ಬ ನ್ನಿ ರೆ ಹರಿ ದಾ ಸರು

। ,,,ಪಾದ ಸಾ ಸ ಸಾ ಗರೀಸಾ । ಸಾ,,,,,, । ,,,, ,,,, ॥
ಹ ಣ್ಣು ಕೊಂಬುವ ಬ ನ್ನಿ ರೆ

। ,,ಮಾಪ ನೀ ದಪಮಪಾಮಗಗರಿ । ,,ರೀಪಮ ಪಾ । ಗಾ,ರಿ ಸಾಸಾ ।
ಚೆ ನ್ನ ಬಾಲಕೃ ಷ್ಣ ನೆಂ ಬ ಕ ನ್ನೆಗೊನೆ ಬಾಳೆ ಹಣ್ಣು

। ,,,ಮಾಮಾಮ ಮಾ,ಗಪಮಮಗ । ರೀ ಮಗಾಮ ದಾ । ಪದಾ ಪಾ,ಪಾ ।
ಸು ತ್ತೇಳು ಲೋಕದಿ ಸುರ ರು ಬಿ ತ್ತಿದ ಹ ಣ್ಣು

। ,,,ಮಾಮಮಾ ಮಾಪಪಮಾಪದಪಾ । ಗಾ ರಿಗಾರಿಗಾಮಮ । ದಪಾ, ಮಗಾಗಾ
ಭ ಕ್ತ ರ ಬಾ ಯೊಳು ನೆನೆ ವ ಹ ಣ್ಣು

। ,,,ನೀಸ ರೀ ರಿಗರಿರಿಗರಿರಿಗ । ,,,ನೀ ಸ ರೀ । ಗರಿರೀಗರಿಮಗಗಾಮಗ । ರೀ
ಅ ರ್ತಿಯುಳ್ಳವ ರೆ ಲ್ಲ ಕೊಳ್ಳಿ ಬೇ ಕಾ ದ ರೆ

। ರೀ, ಮಾಮ ಮಾಮಮಾಗಪಮಗರಿ । ,,, ರಿ ಪಪ ರಿಮ । ಗಸಾ ಸಾ,ನಿದಪ ॥
ನಿ ತ್ಯ ಮಾಧವ ನೆಂ ಬ ಅ ಚ್ಚ ಮಾ ವಿನ ಹ ಣ್ಣು

। ,,ಗಮಾಮ ಗಮಾಮ ಗಪಮಮಗರಿ । ,,,ಮಗಾಮ ದಾ । ,,ನೀ ಪದಪಾ ।
ಅಜ ನ ಪಡೆ ದ ಹ ಣ್ಣು ಗ ಜ ವ ಕಾ ಯ್ದ ಹ ಣ್ಣು

। ,,ಮಮಾಮ ಮಾಪಮಪಾಮದಪಮ । ಗಾ ರೀಗಾಮಾದ । ಪಮಮಾಗಾ,, ॥
ನಿ ಜ ಮುನಿ ಗಳಿ ಗೆ ತೋರಿಸಿದ ಹ ಣ್ಣು

। ,,ಸ ನೀಸರೀ ರೀರೀ ಪರೀ, । ನೀನೀಸಾ ರೀ । ರಿ ರೀ ರಿಮಾಗರಿ ।
ತ್ರಿ ಜ ಗವಂದಿ ತ ಪಾ ಲ್ಗಡ ಲೊಡೆ ಯನ ಹ ಣ್ಣು

। ,,ಮಮಾಮ ಮಾಮಮಾ ಗಪಮಗರಿ । ,,,ಗಪಮ ರಿಮ । ಗಸಾ ಸಾನಿದಪ ॥
ಸುಜ ನ ಭ ಕ್ತರು ಎ ಲ್ಲ ಕೊಳ್ಳ ಬ ನ್ನಿರಿ ಹ ಣ್ಣು

ಎರಡನೆಯ ಚರಣದಂತೆ

ತುರುವ ಕಾಯ್ದ ಹಣ್ಣು ಉರಗನ ತುಳಿದ ಹಣ್ಣು
ಕರೆದರೆ ಕಂಭದೊಳು ಓ ಎಂಬ ಹಣ್ಣು
ಮರುಗುವ ಧ್ರುವನಿಗೆ ಪಟ್ಟಗಟ್ಟಿದ ಹಣ್ಣು
ಕರುಣಾಳು ಕಾಗಿನೆಲೆಯಾದಿಕೇಶವ ಹಣ್ಣು

## ಹಲವು ಜೀವನವ ಒಂದೆಲೆ ನುಂಗಿತು

ಹಲವು ಜೀವನವ ಒಂದೆಲೆ ನುಂಗಿತು–ಕಾಗಿ
ನೆಲೆಯಾದಿ ಕೇಶವನು ಬಲ್ಲ ನೀಬೆಡಗ

ಹರಿಯ ನುಂಗಿತು ಪರಬ್ರಹ್ಮನ ನುಂಗಿತು
ಸುರರಿಗುಂಟಾದ ದೇವನ ನುಂಗಿತು
ಉರಿಗಣ್ಣ ಶಿವನ ಒಂದೆಲೆ ನುಂಗಿತೆಲೊ ದೇವ
ಹರಿಯ ಬಳಗವ ಒಂದೆಲೆ ನುಂಗಿತು

ಎಂಟು ಗಜವನು ನುಂಗಿ ಕಂಟಕರ್ಬೈವರ ನುಂಗಿ
ಉಂಟಾದ ಗಿರಿಯ ತಲೆಯ ನುಂಗಿತು
ಕಂಟವ ಪಿಡಿದ  ಬ್ರಹ್ಮನ ನುಂಗಿತೆಲೊ ದೇವ
ಎಂಟಾರು ಲೋಕ ಒಂದೆಲೆ ನುಂಗಿತು

ಗಿಡವ ನುಂಗಿತು ಗಿಡದೊಡತೊಟ್ಟನು ನುಂಗಿತು
ಗಿಡುವಿನ  ತಾಯ ತಂದೆಯ ನುಂಗಿತು
ಬೆಡಗ ಬಲ್ಲರೆ ಪೇಳಿರಿ ದೇವ ಕನಕದಾಸ ಎ–
ನ್ನೊಡೆಯಾದಿಕೇಶವ ಬಲ್ಲನೀ ಬೆಡಗ

ರಾಗ:ವಾಸಂತಿ      ಸ ರಿ ಿ ಗ ಿ ಪ ದ ಿ ಸ      ಖಂಡ ಛಾಪು

। ಪಗ̇ರಿ̇ ರಿ̇ಗರಿ ಸ̇ಸ̇ ಪದ । ದಸ̇ ಸಾ̇ ಸ̇ಸಾ̇, ಪಾ । ಪಗ ಗ ರಿರೀ,, ಗಾ । ರಿಗ ರಿಸ ಸಸಾ,,, ।
**ಹಲವು ಜೀವನವ ಒಂ ದೆಲೆ ನುಂಗಿತು ಒಂ ದೆಲೆ ನುಂಗಿತು ಒಂ ದೆಲೆ ನುಂಗಿತು**
। ಪಾಪದಸ̇ ಸ̇ಪ ಪ ದಸ̇ । ಸ̇ಸ̇ಪ ಪಾಪ ದಸ̇ ಸ̇ ಸ̇ಸಾ̇,, ॥
**ಕಾಗಿನೆಲೆಯಾದಿ ಕೇ ಶವನು ಬ ಲ್ಲನೀ ಬೆಡಗ**

। ಗಪಪ ಸ̇ಪ ಪಪ ಗಪಾ । ಪಾದ ಸ̇ಪ ಪಾಪಪಾ ॥
**ಹರಿಯ ನುಂಗಿತು ಪರ ಬ್ರಹ್ಮನ ನುಂಗಿತು**
। ಗ ದಪಗಪ ಪಗಗ ಗಪ । ಗರಿ ರೀ ಗಗರೀ,, ।
**ಸುರರಿಗುಂಟಾದ ದೇ ವನ ನುಂಗಿತು**
। ಪ ದದಸ̇ಸ̇ ಸ̇ಸ̇ ಸ̇ ಸಾ । ಗರಿ ಗರಿ ಸ̇ಸ̇ಸ̇ ಸಾ̇ ಸ̇ ॥
**ಉರಿಗ ಣ್ಣ ಶಿವನ ಒಂ ದೆಲೆ ನುಂಗಿತೆಲೊ ದೇವ**
। ಗಪಪ ದಪಪಗ ಗರಿರಿ । ಸ ರಿ ಗರಿ ರಿರೀ,, ಗ̇ । ರಿ̇ ಗ̇ ರಿ̇ಸ̇ ಸ̇ಸಾ̇,,, ॥
**ಹರಿಯ ಬಳಗವ ಒಂ ದೆಲೆ ನುಂಗಿತು ಒಂ ದೆಲೆ ನುಂಗಿತು**

**ಮೇಲಿನಂತೆ ಮಿಕ್ಕ ಚರಣಗಳು**

**ಎಂಟು ಗಜವನು ನುಂಗಿ ಕಂಟಕರೈವರ ನುಂಗಿ
ಉಂಟಾದ ಗಿರಿಯ ತಲೆಯ ನುಂಗಿತು
ಕಂಟವ ಪಿಡಿದ ಬ್ರಹ್ಮನ ನುಂಗಿತೆಲೊ ದೇವ
ಎಂಟಾರು ಲೋಕ ಒಂದೆಲೆ ನುಂಗಿತು**

**ಗಿಡವ ನುಂಗಿತು ಗಿಡದೊಡತೊಟ್ಟನು ನುಂಗಿತು
ಗಿಡುವಿನ ತಾಯ ತಂದೆಯ ನುಂಗಿತು
ಬೆಡಗ ಬಲ್ಲರೆ ಪೇಳಿರಿ ದೇವ ಕನಕದಾಸ ಎ–
ನ್ನೊಡೆಯಾದಿಕೇಶವ ಬಲ್ಲನೀ ಬೆಡಗ**

# ಹೇಗಿದ್ದು ಹೇಗಾದೆಯೊ ಆತ್ಮ

ಹೇಗಿದ್ದು ಹೇಗಾದೆಯೊ ಆತ್ಮ
ಯೋಗೀಶಾನಂದಪುರದಲಿರುವುದ ಬಿಟ್ಟು

ಬಸಿರ ಹಳ್ಳಿಗೆ ಬಂದು ಮಾಸನೂರಲಿ ನಿಂದು
ಕುಸುಕಾಡಿ ನುಡಿದು ನೆಲಬಟ್ಟೆವಿಡಿದು
ಕಿಸುಕದರಿವೆಯ ಪೊದ್ದು ಮಲಮೂತ್ರದಲಿ ಬಿದ್ದು
ವಸುಧೆಯಲಿ ದಿನಗಳೆದಯಲ್ಲ ಆತ್ಮ

ಎಳಗೆರೆಯಲಿ ಆಡಿ ಯೌವನದೂರಿಗೆ ಬಂದು
ಥಳಥಳಿಪ ಹಸ್ತಾದ್ರಿ ನೆಳಲ ಸೇರಿ
ಅಳಲು ಸುತ ಬೆಳೆದು ದಾರಿದ್ರ್ಯ ಪೇಟೆಗೆ ಬಂದು
ಹಳೆಯ ಬೀಡಿಗೆ ಪಯಣವೇ ಆತ್ಮ

ಗನ್ನಗತದ ಮಾತು ಇನ್ನು ನಿನಗೇತಕೋ
ಮುನ್ನ ಮಾಡಿದ ಕರ್ಮಭರದೊಡಲಿದೆ
ಉನ್ನತದ ಕಾಗಿನೆಲೆಯಾದಿಕೇಶವ ಸುಪ್ರ–ಸನ್ನ
ಮೂರುತಿಯ ಭಜಿಸೆಲೊ ಆತ್ಮ

ರಾಗ: ಕಲ್ಯಾಣಿ　　　ಸ ರಿ ಗ ಮ ಪ ದ ನಿ ಸ　　　ಖಂಡ ಛಾಪು

। ಪಾಮದಪಮಗರಿರೀರೀ । ಗರಿಗಾಸಾ,,ನೀ । ರೀ;;;; । ;;;ನೀರೀ ॥
**ಹೇ　ಗಿ　ದ್ದು ಹೇ　ಗಾ ದೆ　ಯೊ　ಆತ್ಮ**

। ಪಾಮದಪಮಗರಿರೀರೀ । ಗರಿಗರಿನೀದಾನೀ । ಸಾ;;;; । ;;;;; ।
**ಹೇ　ಗಿ　ದ್ದು　ಹೇ　ಗಾ　ದೆ　ಯೊ**

। ,,ಸಾ　ಗಮಪಮಗಾ । ಪಾ,,ಪಾ,,ಪಾ । ,,ನಿ ರೀನಿಪನಿದಾ । ಪಾಪಮ ರೀಗಮಗಾ ।
**ಯೋಗೀ　ಶ　ನಾ ನಂ ದ　ಪುರ ದಲಿ ರು　ವುದ　ಬಿಟ್ಟು**

। ,,ನಿ ನೀದ ನಿದಪಗ । ಪಮಗಾ ಪಾ,,ಪಾ । ,,,ನೀ ರಿಮಾ,, । ಗರಿರೀ ಗಾ,,ಗಾ ।
**ಬಸಿ ರ ಹ　ಳ್ಳಿ　ಗೆ ಬಂ ದು　ಮಾಸನೂ　ರ ಲಿ ನಿಂ ದು**

। ,,ಗ ಗಾಮದಾದಾ । ದಾದನಿನೀಸನಿದಾ,, । ,,ಮದಾನಿಸಾಸಾ । ನೀದಾಸಾ,,,, ।
**ಕುಸುಕಾ　ಡಿ　ನುಡಿ ದು　ನೆ ಲ ಬ　ಟ್ಟೆ　ವಿ ಡಿ ದು**

। ,,ನಿನೀರಿಗಾಗಾ । ಗಾಗಾ ರೀ ಗಾ,, । ,,ನಿಗರಿಸಾ,, ಸ । ಸಾಸಾ ಸಾಸಾನಿರಿಸನಿದಾ ।
**ಕಿಸುಕದ ರಿ　ವೆಯ ಪೊದ್ದು　ಮ ಲಮೂತ್ರ　ದ ಲಿ ಬಿ ದ್ದು**

। ,,ಮದಾನಿ ಸಾನೀ । ದಾನೀಪಮಗಾಮಾ । ಮದದನಿಸನಿನಿದಪಾ । ಪಾಮದಪಮಗರಿಸರಿಗಾ ॥
**ವ ಸುಧೆಯಲಿ　ದಿ ನ ಗ　ಳೆ ದೆ　ಯೋ　ಆ　ತ್ಮ**

। ,,ರಿ ನೀದಮಾರೀ । ಮಾ,,ಮಾ,, ಮಾ । ಪಾಪಾಪಾಪಾ,, । ಪಾರೀ ಗಾ,,ಗಾ ॥
**ಎಳಗೆರೆ ಯ　ಲಾ　ಡಿ　ಯೌ　ವ ನ ದ ಊ　ರಿ ಗೆ ಬಂ ದು**

। ,,ನಿ ರೀಮಮಾಮಾ । ,,ಪಾಪಮಗಮಪಾ । ,,ಮದಾನಿ ಸನಿನೀ । ನೀ,ದಪಮಗಮಪಾ ।
**ಥಳ ಥ ಳಿ　ಪ　ಹ ಸ್ತಾ　ದ್ರಿ　ನೆ ಳ ಲ ಸೇ　ರಿ**

। ,,ನಿ ರೀಗ　ಮಾರೀ । ನೀದಾದಾ ಸಾ । ಸಾ,,ಸಾ　ಪಾದಪಮಪ । ಸಾಸಾ ಸಾ,,ಸಾ ।
**ಅಳ ಲು ಸು ತ　ಬೆ ಳೆ ದು ದಾ　ರಿ　ದ್ರ್ಯ ಪೇ　ಟೆ ಗೆ ಬಂ ದು**

। ,,ಮದಾನಿ　ಸನಿನಿದ । ಪಮಗಾ ಮಾಗಾ ಮಾ । ಮದಸಾರಿಸನೀದಪಮಗ । ಪಾ,ಮರಿಗಾರಿಸಾ ।
**ಹ ಳೆ ಯ ಬೀ　ಡಿ　ಗೆ　ಪ　ಯಣ　ವೇ　ಆ　ತ್ಮ**

**ಮೊದಲನೆಯ ಚರಣದಂತೆ**

**ಗನ್ನಗತದ ಮಾತು ಇನ್ನು ನಿನಗೇತಕೋ**
**ಮುನ್ನ ಮಾಡಿದ ಕರ್ಮಭರದೊಡಲಿದೆ**
**ಉನ್ನತದ ಕಾಗಿನೆಲೆಯಾದಿಕೇಶವ ಸುಪ್ರ-**
**ಸನ್ನ ಮೂರುತಿಯ ಭಜಿಸೆಲೊ ಆತ್ಮ**

# ಹೇಗೆ ನೀ ದಾಸನಾದೆ

ಹೇಗೆ ನೀ ದಾಸನಾದೆ ಪ್ರಾಣಿ

ಹೇಗೆ ನೀ ದಾಸನಾದೆ ಹೀಗೆ ಸಂಸಾರದಲ್ಲಿ
ಮಂಗನಂತೆ ಭವ ಭಂಗವ ಪಡುವವನು

ತನುವು ತನ್ನದು ಎಂದು ತನಯ ಮಾನಿನಿಯರ
ಇನಿತು ಎನಗೆ ಗತಿ ಎಂಬುವ ಮೂಢನೆ
ಆಸೆಯ ಬಿಡಲಿಲ್ಲ ಕಾಸು ಗಳಿಸುವೆಯಲ್ಲ
ದೋಷಕೆ ಗುರುಯಾಗಿ ಹೇಸಿಕೆಯೊಳು ಬಿದ್ದು

ಬತ್ತಿ ಹೋಯಿತು ನದಿ ಬಿತ್ತದೆ ಬೆಳೆಯದೆ
ಅತ್ತರೆ ಬಹುದೇನೊ ರಾಸಿ ಬೆಳೆಯ ಸೂಸಿ
ಆಡುವ ಮಕ್ಕಳ ಕೈಗೆ ನೀಡದೆ ಕಡಲೆಯ
ಬೇಡಿದರೆ ಕೊಟ್ಟು ಕೂಡಿ ಆಡದ ಬೆಡ

ಪಕ್ಷಿ ವಾಹನನ ಗುಣವ ಲೆಕ್ಕಿಸಿ ಪೊಗಳದೆ
ಬೆಕ್ಕಸ ಬೆರಗಾಗಿ ಅಕ್ಕಿಗೆ ತಿರುಗುತ
ಭೋಗಿಶಯನನ ಪಾದ ರಾಗದಿ ಭಜಿಸದೆ
ಕಾಗಿನೆಲೆಯಾದಿಕೇಶವನದಾಸ

ರಾಗ:ಆಭೋಗಿ ಸ ರಿ೨ ಗ೨ ಮ೧ ದ೨ ಸ ಏಕತಾಳ

। ,,ದಸದಸಾ,ಮಾ ರೀ ಗರಿಸಾ । ರೀ,, ,,,, ,,ಗಮದಸರಿಸ ॥ ದ
ಹೇಗೆ ನೀ ದಾಸನಾ ದೆ ಪ್ರಾಣಿ

। ಮಾ,ಮಗಾ ಮಾ ಮದಾದದಾದಾ । ದಸದಸಾ, ಮಾದಾ,ಸಸಾಸಾ । ಸಾ ರಿಗಾ ರಿ ಸಸ ಸಗ ರಿಸ ದಸ ಪದ ।
ಹೇ ಗೆ ನೀ ದಾ ಸನಾ ದೆ ಹೀಗೆ ಸಂ ಸಾ ರದ ಲ್ಲಿ ಮಂಗನಂತೆ ಭವ ಭಂಗವ ಪಡುವವ

। ಮಮಮ ಮಾಮಗಾ ಮಾಮಾ,,,, । ದದದ ದಾ ದದಸ ದಾ,, ,,,, ।
ತ ನುವು ತ ನ್ನದು ಎಂ ದು ತನಯ ಮಾನಿನಿಯರ
। ಸ ರಿಗ ಮಗರಿ ಸಸ ಸಾ ರಿ ದ ಸಾ ಸ ಸ ।
ಇನಿತು ಎ ನಗೆ ಗತಿ ಎಂಬುವ ಮೂಢನೆ
। ದಸಸಸ ರಿ ಗ ಮಗರೀ,ಗರಿರಿಸ । ದಸಸ ದಸಸರಿಸದಸಸಾ,,,, ।
ಆ ಸೆಯ ಬಿಡಲಿ ಲ್ಲ ಕಾ ಸು ಗಳಿಸುವೆ ಯಲ್ಲ
। ಸಗ ಗರಿ ರಿ ಸಸ ದ ದಸಸದದ ಮ ಮದ ।
ದೋಷಕೆ ಗುರಿಯಾಗಿ ಹೇಸಿಗೆಯೊಳು ಬಿದ್ದು

ಮೇಲಿನಂತೆ

ಬತ್ತಿ ಹೋಯಿತು ನದಿ ಬಿತ್ತದೆ ಬೆಳೆಯದೆ
ಅತ್ತರೆ ಬಹುದೇನೊ ರಾಸಿ ಬೆಳೆಯ ಸೂಸಿ
। ದಸಸ ಸ ರಿಗಮಗ ರೀರೀ,, । ಗಾಗಗಾ ರಿರಿಸ ರೀ,,ಸಾ,, ।
ಆ ಡುವ ಮಕ್ಕಳ ಕೈಗೆ ನೀಡದೆ ಕಡಲೆಯ
ಬೇಡಿದರೆ ಕೊಟ್ಟು ಕೂಡಿ ಆಡದ ಬೆಡ

ಪಕ್ಷಿ ವಾಹನನ ಗುಣವ ಲೆಕ್ಕಿಸಿ ಪೊಗಳದೆ
ಬೆಕ್ಕಸ ಬೆರಗಾಗಿ ಅಕ್ಕಿಗೆ ತಿರುಗುತ
। ದಾ ಸರಿಗ ಮಗಸ ರೀ ರೀ,,, । ಗಾಗಗಾ ರಿ ರಿ ಸರೀಸಾ,,,, ।
ಭೋಗಿಶಯನ ನ ಪಾದ ರಾಗದಿ ಭಜಿಸದೆ
। ದಗಗರಿಸ ದಪ ದ ದಸಸದಮಮಗಮ ।
ಕಾ ಗಿನೆಲೆಯಾದಿ ಕೇ ಶವನ ದಾ ಸ

## ಅಡಿಗೆಯನು ಮಾಡಬೇಕಣ್ಣ

ಅಡಿಗೆಯನು ಮಾಡಬೇಕಣ್ಣ–ನಾನೀಗ ಜ್ಞಾನ
ದಡಿಗೆಯನು ಮಾಡಬೇಕಣ್ಣ

ಅಡಿಗೆಯನ್ನು ಮಾಡಬೇಕು
ಮಡಿಸಬೇಕು ಮದಗಳನ್ನು
ಒಡೆಯನಾಜ್ಞೆಯಿಂದ ಒಳ್ಳೆ
ಸಡಗರದಲಿ ಮನೆಯ ಸಾರಿಸಿ

ತನ್ನ ಗುರುವನು ನೆನೆಯಬೇಕಣ್ಣ
ತನುಭಾವವೆಂಬ ಭಿನ್ನಕಲ್ಮಶವಳಿಯಬೇಕಣ್ಣ
ಒನಕೆಯಿಂದ ಕುಟ್ಟಿಕೇರಿ ತನಗೆತಾನೆ ಆದ ಕೆಚ್ಚ
ನನುವರಿತು ಇಕ್ಕಬೇಕು ಅರಿವರ್ಗವೆಂಬ ತುಂಟರಳಿಸಿ

ತತ್ವಭಾಂಡವ ತೊಳೆಯಬೇಕಣ್ಣ–ಸತ್ಯಾತ್ಮನಾಗಿ
ಅರ್ತಿ ಅಕ್ಕಿಯ ಮಥಿಸಬೇಕಣ್ಣ
ಕತ್ತರಿ ಮನವೆಂಬ ಹೊಟ್ಟಾನು
ಎತ್ತಿ ಒಲೆಗೆ ಹಾಕಿ ಇನ್ನು
ಮುತ್ತಿಕೊಂಡಿಹ ಮಮತೆಯನ್ನು
ಎತ್ತಿ ಎಸೆದು ಹಿಂಗಿಸುತಲಿ

ರಾಗ: ಭೈರವ　　　　ಸ ಗ ಮ ದ ನಿ ಸ　　　　ಖಂಡ ಛಾಪು

। ಸನಿದನಿ ದ । ಮಾದ ಮಗ । ಸಾಗಾ, । ಗಮದನಿದ । ಸನಿದನಿ ದ । ಮಾದಮಗ । ಸಾಗಾ, । ,,ಗಾ ಮ ।
**ಅಡಿಗೆಯನು ಮಾಡಬೇ ಕ ಣ್ಣ ನಾ ನೀ ಗ ಅಡಿಗೆಯನು ಮಾಡಬೇ ಕ ಣ್ಣ ಜ್ಞಾನ**
। ಮದದದ ಮ । ದನಿ ನಿನಿದ । ನೀಸಾ, । ,,,,, ।
**ದಡಿಗೆಯನು ಮಾಡಬೇ ಕ ಣ್ಣ**

। ಸಸಸ ಮಾ । ಮಾ ದಾ ಮ । ಗಾಗಾ, । ,,,,, । ಮಗಮದಾ । ದಾ ಮಗಮ । ದಾದಾ, । ,,,,, ।
**ಅಡಿಗೆಯ ನ್ನು ಮಾಡ ಬೇಕು ಮಡಿಸ ಬೇ ಕು ಮದಗ ಳ ನ್ನು**
। ಮದದ ಮಾ । ದನಿನಿ ದಾ । ಸಾ,,, । ,,ಸಾಸ । ನಿಸ ನಿಸನಿ । ದಾ ಮಮಮ । ಗಾಮಗಾ । ,,,,, ।
**ಒಡೆಯನ ಆ ಜ್ಞೆಯಿಂ ದ ಒಳ್ಳೆ ಸಡಗರದ ಲಿ ಮನೆಯ ಸಾರಿ ಸಿ**

। ಗಾಮ ಗಮ । ಗಮ ಗಸಸ । ನಿದನೀಸ । ,,,,, ।
**ತ ನ್ನ ಗುರು ವನು ನೆನೆಯ ಬೇಕ ಣ್ಣ ।**
। ಸಸ ಮಾಮ । ಮಾಮಾ, । ಮದಮಗಮ । ದ ದದಾ, । ನಿನಿದ ನೀ । ಸಾಸಾ,, । ನಿನಿದ ನೀ । ಸಾ,,, ।
**ತನುಭಾವ ವೆಂಬ ಭಿ ನ್ನಕ ಲ್ಮಶವು ಅಳಿಯಬೇ ಕ ಣ್ಣ ಅಳಿಯಬೇ ಕು**
। ನಿಸಗಸಾ । ಸಾ,,, । ನಿಸ ನಿದಾ । ದಾ,,, । ಮಗಸ ಗಾ । ಮಾ,,, । ದಾದಾ, । ,,ನೀದ ।
**ಒನಕೆಯಿಂ ದ ಕುಟ್ಟಿಕೇ ರಿ ತ ನಗೆ ತಾ ನೆ ಆ ದ ಕೆ ಚ್ಚ**
। ನಿಸ ನಿಸನಿ । ದಾನಿದಾ । ಮಾ,,, । ಗಮಗಮಗ । ಮಾಮಾ, । ಗಮದನಿಸ । ದಾ,,, ।
**ನನುವರಿತು ಇ ಕ್ಕಬೇ ಕು ಅರಿ ವ ರ್ಗ ವೆಂ ಬ ತುಂಟರಳಿ ಸಿ**

। ಸಾಸ ಸಾ । ನಿಸ ನಿ ದದ । ನೀಸಾಸ । ,,,,, । ಸಾಗಾ ಸ । ಗಸನೀ, । ಗಾಗಸಾ । ನಿಸ ನಿ ದದ । ನೀಸಾಸ । ,,,,, ।
**ತ ತ್ವಭಾಂ ಡವ ತೊಳೆಯ ಬೇಕಣ್ಣ ಸ ತ್ಯಾತ್ಮ ನಾ ಗಿ ತತ್ವಭಾಂ ಡವ ತೊಳೆಯ ಬೇಕಣ್ಣ**
। ಗಾಗ ಮಾ । ಗಮ ಗ ಸಸ । ಗಾಮಾಮ । ,,,,, । ಗಾಮಮಾ । ಮದಮಮಗ । ಮಾ ದ ದಾ । ,,,,, ।
**ಅರ್ತಿ ಅ ಕ್ಕಿಯ ಮಥಿಸ ಬೇಕ ಣ್ಣ ಕ ತ್ತ ರಿ ಮನವೆಂ ಬ ಹೊಟ್ಟನು**
। ದಾದ ನಿ ಸ । ಸಾ ನೀ ದ । ನೀಸಾ, । ,,,,, । ನೀ ಸನಿಸ । ನಿಸ ನಿ ನಿ ಸ । ನೀ ದಾ, । ,,,,, ।
**ಎ ತ್ತಿ ಒಲೆ ಗೆ ಹಾಕಿ ಇನ್ನು ಮುತ್ತಿಕೊಂ ಡಿಹ ಮಮತೆ ಯನ್ನು**
। ಮಾಮಾ, । ದದದಾ, । ಮದನಿಸ ನಿ । ಸಾ,,, ।
**ಎ ತ್ತಿ ಎಸೆದು ಹಿಂ ಗಿಸುತ ಲಿ**

# ಆರಿಗಳವಲ್ಲಾತ್ಮ ಯೋಗಸಿದ್ಧಿ

ಆರಿಗಳವಲ್ಲಾತ್ಮ ಯೋಗಸಿದ್ಧಿ
ಸೇರಿ ಸುಜ್ಞಾನದಲಿ ಸವಿದುಂಬಗಲ್ಲದೆ

ರಜಸು–ತಾಮಸವೆಂಬದಯವನೆಲ್ಲವ ಕಳೆದು
ಗಜಬಜಿಸುವ ಪಂಚಭೂತಗಳ
ರಜನಿಗೆ ಸಿಲ್ಕದೆ ಪರಬ್ರಹ್ಮನ ಬಲು
ನಿಜವ ತಿಳಿಯಬಲ್ಲ ನಿರ್ವಾಣಗಲ್ಲದೆ

ಭಿನ್ನಭೇದಗಳೆಂಬ ಬಲು ಸಂಶಯ ಕಳೆದು
ತನ್ನೊಳಗೆ ತಾ ತಿಳಿದು ತಾರಕ ಬ್ರಹ್ಮವ
ಚೆನ್ನಾಗಿ ನೀ ನೋಡು ಚೆಲುವ ಕಂಗಳಿಂದ
ತನ್ನಗ್ನಿಯೊಳಗಿರುವ ಪ್ರೌಢರಿಗಲ್ಲದೆ

ಅಕಾರ ಉಕಾರ ಮಕಾರ ಎಂತೆಂಬ
ಓಂಕಾರಕೆ ಕೂಡಿ ಎರಡಿಲ್ಲದ
ಸಾಕಾರ ಕಾಗಿನೆಲೆಯಾದಿಕೇಶವನ
ಆಕಾರದೊಡನಾಡುವರಿಗಲ್ಲದೆ

**ರಾಗ: ಬಾಗೇಶ್ರೀ** ಸ ಗ೨ ಮ೧ ದ೨ ನಿ೨ ಸ ಸ ನಿ೨ ದ೨ ಮ೧ ಪ ದ೨ ಗಾ೨ ಮ೧ ರಿ೨ ಸ **ಖಂಡ ಛಾಪು**

। ಸಗರಿಗರಿಗಸರಿ । ನಿಸನೀ ದ । ದಾ ನಿಸಗ । ಮಾ,,, ।
**ಆ ರಿ ಗಳ ವ ಲ್ಲಾತ್ಮ ಯೋಗಸಿ ದ್ಧಿ**
। ಗಾಮ ನಿದ । ಸಾ ಸಸ ಸ । ಸಸ ಸಾ ರಿ । ನಿರಿಸಾನಿ ದಾ ।
**ಸೇರಿ ಸು ಜ್ಞಾನದಲಿ ಸವಿದುಂಬ ಗ ಲ್ಲದೆ**

। ಮಮಮ ಗಾ । ಮಮಮಾಮ । ಮಗ ಮದಾ । ನಿ ದ ಸಸಸ ।
**ರ ಜಸು ತಾ ಮಸವೆಂ ಬ ರ ಯವ ನೆ ಲ್ಲವ ಕಳೆದು**
। ದನಿಸ ಗ ರಿ । ಸಾ ಸಾ ಸ । ದಮಾದನಿ । ಸಾ,,, ।
**ಗಜಬಜಿಸು ವ ಪಂಚ ಭೂ ತಗ ಳ**
। ನಿದನಿದಾ । ಮಪದಮಾ । ಮಗಮಗರಿ । ಸಾ ಮಮ ।
ರಜನಿಗೆ ಸಿ ಲ್ಕದೆ ಪ ರಬ್ರ ಹ್ಮ ನ ಬಲು
। ಮಪದ ಮಮ । ಗಮ ಗರಿಸ । ಮಗರಿಸ ಸ । ಸಮಗಮಾ ।
ನಿ ಜವ ತಿ ಳಿ ಯ ಬ ಲ್ಲ ನಿ ರ್ವಾಣ ಗ ಲ್ಲದೆ

। ದಾನಿಸಗ । ಮಮಮಾಮ । ಗಮ ದಾದ । ನಿಸ ನಿದದ ।
**ಭಿ ನ್ನಭೇ ದ ಗ ಳೆಂ ಬ ಬಲು ಸಂಶ ಯ ಕಳೆದು**
। ಮಗರಿ ಸಸ । ಮಗ ಮಮಮ । ಮಗಮದಾ । ನಿಸನಿ ಸಾ ।
ತ ನ್ನೊಳಗೆ ತಾ ತಿ ಳಿ ದು ತಾ ರ ಕ ಬ್ರ ಹ್ಮವ
। ದನಿಸಗಮ । ಗಾ ರೀ ಸ । ನಿಸ ಸ ಸಾ । ನಿಸನಿದಾ ।
**ಚೆ ನ್ನಾಗಿ ನೀ ನೋಡು ಚೆಲುವ ಕಂ ಗಳಿಂ ದ**
। ಸಾನೀದ । ಮ ದಮಮಮ । ಮಗರಿ ಸಸ । ಸಮಗ ಮಾ ।
**ತ ನ್ನಗ್ನಿ ಯೊಳಗಿ ರುವ ಪ್ರೌಢರಿಗೆ ಅ ಲ್ಲದೆ**

। ನಿಸಾಸಾ । ಸ ಗಾಗಾ । ಮಮಾಮಾ । ಗಾಮಾಮ ।
**ಅಕಾರ ಉಕಾರ ಮಕಾ ರ ಎಂತೆಂಬ**
। ಗಮದಾದ । ದಾ ದಾ ದ । ಮದನಿಸನಿ । ದಾ,,, ।
**ಓಂ ಕಾರ ಕೆ ಕೂಡಿ ಎ ರಡಿ ಲ್ಲ ದ**
। ನೀನೀದ । ಸಾಸಸ ಸ । ರಿಸರಿನಿದ । ಸಸಾಸಾ ।
**ಸಾಕಾರ ಕಾಗಿನೆಲೆ ಯಾದಿಕೇ ಶವನ**
। ನಿಸನೀದ । ಮ ದಮಾಮ । ಗರಿಸಮಗ । ಮಾ,,, ।
**ಆ ಕಾರ ದೊಡನಾ ಡು ವರಿಗ ಲ್ಲ ದೆ**

## ಆರಿಗಾರಿಲ್ಲ ಆಪತ್ಕಾಲದೊಳಗೆ

ಆರಿಗಾರಿಲ್ಲ ಆಪತ್ಕಾಲದೊಳಗೆ
ವಾರಿಜಾಕ್ಷನ ನಾಮ ನೆನೆ ಕಂಡ್ಯ ಮನವೆ

ಹಸಿದು ಬಳಲುವಾಗ ಹಗೆ ಕೈಗೆ ಸಿಲುಕಿದಾಗ
ದೆಸೆಗೆಟ್ಟು ಅಧಿಕ ವ್ಯಾಧಿಯಲಿ ಇರುವಾಗ
ಅಸಮಾನನಾದಾಗ ಅಧಿಕಭೀತಿಗೊಂಡಾಗ
ಬಿಸಜನಾಭನ ನಾಮ ನೆನೆ ಕಂಡ್ಯ ಮನವೆ

ಸಾಲದವರೆಳೆವಾಗ ಚಾಡಿ ಮಾತಿಗೆ ಭೂಪ
ಘುಳಿಘುಳಿಸುತ ಕೋಪವನು ತೋರಿದಾಗ
ಮೇಲು ತಾನರಿಯದೆಯೆ ನಿಂದೆ ಹೊಂದಿರುವಾಗ
ನೀಲ ಮೇಘ ಶ್ಯಾಮನ  ನೆನೆ ಕಂಡ್ಯ ಮನವೆ

ಪಂಥದಲಿರುವಾಗ ಪದವಿ ತಪ್ಪಿರುವಾಗ
ದಂತಿ ಮದವೇರಿ ಬೆನ್ನತ್ತಿದಾಗ
ಕಂತುಪಿತ ಕಾಗಿನೆಲೆಯಾದಿಕೇಶವನ ನಿ
ಶ್ಚಿಂತೆಯಲಿ ನೀನು ನೆನೆ ಕಂಡ್ಯ ಮನವೆ

ರಾಗ: ಸರಸಾಂಗಿ ಸ ರಿ೨ ಗ೩ ಮ೧ ಪ ದ೧ ನಿ೩ ಸ ಆದಿತಾಳ

। ಪದಸನಿದಪಮಪ । ಗಮಾಗಾ, ಸಾ । ಸರೀ ಗಾ,ಮಾ । ಪದಪದಮಪಾ, ।
**ಆ ರಿ ಗಾ ರಿ ಲ್ಲ ಆ ಪತ್ ಕಾ ಲ ದೊಳ ಗೆ**

। ಪಾ,ದನೀ,, । ಸನೀ ರೀ,ರೀ । ನಿಸಾ ನೀ,ದಾ । ಮಪದಾಮಾ,, ।
**ವಾ ರಿಜಾ ಕ್ಷನ ನಾಮ ನೆನೆ ಕಂ ಡ್ಯ ಮ ನ ವೆ**

। ಪದಾಪ ಮಾಗಾ । ರಿಗಾಸಾ,ಸಾ । ಸ ರೀ ಗಾ,ಮಾ । ಪಪಾದಮಪಾ, ।
**ಹಸಿ ದು ಬ ಳ ಲು ವಾಗ ಹಗೆ ಕೈ ಗೆ ಸಿಲು ಕಿದಾ**

। ಪಾ ಪದಾನೀ, । ಸಾ, ಸನೀರೀ । ನಿಸಾನಿದಾದಾ । ನಿನೀಸಾ,ಸಾ ।
**ಗ ದೆಸೆ ಗೆ ಟ್ಟು ಅಧಿಕ ವ್ಯಾಧಿಯಲಿ ಇರುವಾಗ**

। ಪದಾದಾ,ದಾ । ಪಾ,ಮಾಮ ಗ । ಗಮಾ ರೀ,ಸಾ । ಗಾ, ಮಾ,ಮಾ ।
**ಅಸಮಾ ನ ನಾ ದಾ ಗ ಅ ಧಿಕ ಭೀತಿ ಗೊಂಡಾ ಗ**

। ಪಪಾದನೀ,, । ಪದಾ ಮಾ,ಮಾ । ಗಮಾ ರೀ,ಸಾ । ಗಾಗಾಮಾ,, ।
**ಬಿಸ ಜನಾ ಭನ ನಾ ಮ ನೆನೆ ಕಂಡ್ಯ ಮನ ವೆ**

। ,,ಗಾಮಗರೀ । ಮಗಾಸಾ,ಸಾ । ,,ನೀಸನಿ ದಾ । ನಿನೀ ಸಾ, ಸಾ ।
**ಸಾಲದವ ರೆ ಳೆ ವಾಗ ಚಾಡಿ ಮಾ ತಿಗೆ ಭೂಪ**

। ,,ನಿಸಾ ರಿ ರೀ । ಮಗಗರಿಸನಿ ಸಾ । ,ಮರಿಮಾ ಪಾ, । ,ನೀಸಾ,ಸಾ ।
**ಘುಳಿಘುಳಿ ಸು ತ ಕೋ ಪವನು ತೋ ರಿ ದಾಗ**

। ,,ನಿದಾದ ದಾ । ನಿಸಾರಿ ರೀರೀ । ರಿಗಾರಿಗಾ ಸಾ । ನಿನೀ ಸಾ,ಸಾ ।
**ಮೇ ಲು ತಾ ನರಿಯದೆಯೆ ನಿಂ ದೆ ಹೊಂ ದಿರುವಾಗ**

। ದಾ,ನಿ ಸಾ, ನಿ । ದಾ,,ಪಾಮಾ । ಗಮಾ ರೀ,ಸಾ । ಗಾಗಾಮಾ,, ।
**ನೀ ಲ ಮೇಘ ಶ್ಯಾ ಮನ ನೆನೆ ಕಂಡ್ಯ ಮನವೆ**

। ,,ಗಮಾರಿಸಾ । ನಿದಾನೀ,ಸಾ । ನಿಸಾರೀ, ರೀ । ರಿ ಗಾರೀ,ರೀ ।
**ಪಂ ಥದ ಲಿರುವಾಗ ಪದವಿ ತ ಪ್ಪಿರುವಾಗ**

। ಗರೀಗಾ,, ಮ । ಪಾ, ದಾ,ದಾ, । ಪದಾಸಾ,ನೀ । ದಾ,ನಿದಾಪಾ ।
**ದಂ ತಿ ಮ ದ ವೇ ರಿ ಬೆ ನ್ನತ್ತಿ ದಾ ಗ**

। ಪಾ,ದ ನೀಸಾ । ರೀ,ರಿರೀರೀ । ರೀ, ಗಮಾಗಾ । ರಿಗರಿಗಸಾ,, ।
**ಕಂ ತುಪಿತ ಕಾ ಗಿನೆಲೆ ಯಾದಿಕೇ ಶ ವ ನ**

। ನೀ,ರೀ,ನೀ । ಪ ದಾ ಮಾ,ಮಾ । ಗಮಾ ರೀ,ಸಾ । ಗಾಗಾಮಾ,, ।
**ನಿ ಶ್ಚಿಂತೆ ಯಲಿ ನೀ ನು ನೆನೆ ಕಂಡ್ಯ ಮನವೆ**

# ಈ ಸಿರಿಯ ನಂಬಿ

ಈ ಸಿರಿಯ ನಂಬಿ ಹಿಗ್ಗಲು ಬೇಡ ಮನವೆ
ವಾಸುದೇವನ ಭಜಿಸೊ ಒರಟು ಜೀವನವೆ

ನೆಂಟರೂರಿಗೆ ಹೋಗಿ ನಾಲ್ಕು ದಿವಸವಿದ್ದರೆ
ಎಂಟು ದಿನದಾಯಾಸ ಅಟ್ಟಬಹುದೊ
ಉಂಟು ಸೌಭಾಗ್ಯವೆಂಬ ಧೈರ್ಯವ ಬಿಟ್ಟು ವೈ
ಕುಂಠವಾಸಿಯ ಭಜಿಸೊ ತುಂಟ ಜೀವನವೆ

ಮಡದಿ ಮಕ್ಕಳು ಎಂಬ ಮಾಯಾ ಸಂಸಾರಕ್ಕೆ
ಸಡಗರವ ಗೊಂಡು ಬರಿದೆ ಭ್ರಮಿಸಬೇಕೆ
ಬಿಡದೆ ಯಮನಾಳುಗಳು ಬಾರೆಂದು ಎಳೆದಾಗ
ಮಡದಿ ಮಕ್ಕಳು ಬಹರೆ ಭಂಡ ಜೀವನವೆ

ಇಷ್ಟ ಸಂಪತ್ತನ್ನು ಬಡವರಾ ಕರೆತಂದು
ಕೊಟ್ಟು ಮಾಡಿದ ಪಣ್ಯಫಲ ತನ್ನದೊ
ಸೃಷ್ಟಿಯೊಳು ಕಾಗಿನೆಲೆಯಾದಿಕೇಶವನಂಘ್ರಿ
ಮುಟ್ಟಿ ಮನದಲಿ ಭಜಿಸೊ ಭ್ರಷ್ಟ ಜೀವನವೆ

ರಾಗ: ತಾರವ ಸ ಗ³ ಮ¹ ದ¹ ನಿ³ ಸ ತ್ರಿಪುಟ ತಾಳ

। ಗಸಾ ಗಮದಾ । ನೀ,ನೀ ಸಾ । ನಿಸಾ ನಿದದಾ । ನಿ ನೀಸಾ,, ।
ಈ ಸಿರಿ ಯ ನಂಬಿ ಹಿ ಗ್ಗಲು ಬೇಡ ಮನ ವೆ
। ಸನಿಸ ನಿದದದ । ಸದಾಮಾ,, । ಮಗಮ ಗಾಸಾ । ಗಗಾಮಾ,, ।
ವಾಸುದೇವನ ಭಜಿಸೊ ಒ ರಟು ಜೀ ವನವೆ

। ಗಾಮಮದಮಮ । ಮಗಮ ಗಾಸಾ । ಸನಿ ಸ ನಿದದಾ । ನೀನಿಸಾ,, ।
ನೆಂಟರೂ ರಿ ಗೆ ಹೋಗಿ ನಾಲ್ಕು ದಿವಸ ವಿ ದ್ದ ರೆ
। ಸಾ,ಮಾ ಮಾಮ । ಮದಾದಾ ದಾ । ದಾಮ ದನಿಸನಿ । ದಾ,,,,, ।
ಎಂಟು ದಿ ನ ದಾ ಯಾಸ ಅ ಟ್ಟ ಬ ಹು ದೊ
। ನೀ, ಸಾ ಸಾ । ನೀದ ನೀ ಸಾ । ದಸನಿದಾಮಾ । ಗಮಾಗಾ ಸಾ ।
ಉಂಟು ಸೌ ಭಾಗ್ಯವೆಂಬ ಧೈ ರ್ಯ ವ ಬಿ ಟ್ಟು ವೈ
। ಮಾಮಮಾಮಗ । ಮದಾಮಾ,, । ಗಾ ಮ ಗಾಸಾ । ಗಗಾಮಾ,, ।
ಕುಂತ ವಾ ಸಿಯ ಭಜಿ ಸೊ ತುಂಟ ಜೀ ವನವೆ

। ಸ ನಿ ಸ ನಿದದದ । ನೀ,ಸಾ ಸಾ । ಗಾ, ಮಾಮಾ । ದಾ,ಮಾ,, ।
ಮಡದಿ ಮ ಕ್ಕಳು ಎಂಬ ಮಾ ಯಾ ಸಂ ಸಾ ರ ಕ್ಕೆ
। ಮಗಮದದದಾ । ದಾ ನಿ ದದಮಾ । ದ ದ ಮದನಿಸನಿ । ದಾ,,,,, ।
ಸಡಗ ರ ವ ಗೊಂಡು ಬರಿದೆ ಭ್ರಮಿಸ ಬೇ ಕೆ
। ನಿನಿ ನಿ ಸ ಸ ಸಾ । ಸ ನಿದ ನೀಸಾ । ಸಗಸಸನಿದಾ । ನಿಸಾನೀದಾ,, ।
ಬಿಡದೆ ಯಮುನಾ ಳುಗಳು ಬಾ ರೆಂ ದು ಎಳೆದಾಗ
। ದಮಮ ಮಾಮಮ । ದಮಾಗಾ,, । ಮಾಗ ಸಾ,, । ಗಗಾಮಾ,, ।
ಮಡದಿ ಮ ಕ್ಕ ಳು ಬಹ ರೆ ಭಂಡ ಜೀ ವನವೆ

। ಗಮಗ ಸಾಸಾ । ನಿಸನಿದಾ,, । ನಿನಿನಿಸಾ,, । ಗಮಗ ಸಾಸಾ ।
ಇ ಷ್ಟ ಸಂಪ ತ್ತ ನ್ನು ಬಡವರಾ ಕ ರೆ ತಂದು
। ಸಾ ಸ ಮಾಮಮ । ಮದಾಮಾ ಗ ಗ । ಮಗಮದನಿಸನಿ । ದಾ,,,,, ।
ಕೊಟ್ಟು ಮಾಡಿದ ಪು ಣ್ಯ ಫಲ ತ ನ್ನ ದೊ
। ನಿಸಸ ನಿದದಾ । ನೀನಿಸಾಸಾ । ಸಗ ಗಸನಿನಿದ । ನೀ, ಸಾ ಸಾ ।
ಸೃ ಷ್ಟಿಯೊಳು ಕಾಗಿನೆ ಲೆ ಯಾದಿಕೇ ಶವ ನ ಅಂಘ್ರಿ
। ಸಾ ಗ ಸ ಗಸನಿ । ದನೀದಾ,, । ಗಾ ಮ ಗಾಸಾ । ಗಗಮಾ,, ।
ಮುಟ್ಟಿ ಮನದಲಿ ಭಜಿಸೊ ಭ್ರಷ್ಟ ಜೀ ವನವೆ

## ಎಲ್ಲಿಂದ ಬಂದೆ ಮುಂದೆತ್ತ ಪಯಣ

ಎಲ್ಲಿಂದ ಬಂದೆ ಮುಂದೆತ್ತ ಪಯಣ
ಇಲ್ಲಿ ನಿನಗೆಷ್ಟು ದಿವಾಲಸ್ಯ ಮರುಳೆ

ಮಾತೆಯುದರದೊಳು ನವಮಾಸ ಮಲಮೂತ್ರದೊಳು
ಯಾತನೆಯ ಯೋನಿ ಮುಖ ಮಾರ್ಗವಿಡಿದು
ಭೂತಳಕೆ ಬಂದ ಹದನೇನ ತೀರಿಸಿಕೊಂಡೆ
ಜಾತಿಯಾವುದು ನಿನ್ನ ಹೆಸರೇನು ಮರುಳೆ

ಮುಂದಾದ ಪಥವ ಸೇರುವೆ ಮರುಳೆ ಸಾಕಿನ್ನು
ಹಿಂದೆ ನೆರವಾಗಿ ನಿಂತಾಪ್ತರುಂಟೆ
ಒಂದುಗೂಡಿದ ಪತ್ನಿ ಸುತರೆಲ್ಲ ವರ್ಜಿಪರು
ನಿಂದು ಮಾತಾಡು ಬರಿದೆ ಬಳಲಿದೆ ಮರುಳೆ

ಬರವಿದೇತಕೆ ನಿನ್ನ ಸ್ಥಳವೆಲ್ಲಿ ನೆಲೆಗೊಂಡು
ಇರುವ ಮಂದಿರವಾವುದದನೆನಗೆ ಹೇಳೊ
ಧರೆಯೊಳಗೆ ವರಕಾಗಿನೆಲೆಯಾದಿಕೇಶವನ
ಸಿರಿ ಚರಣಕಮಲವನು ನೆರೆನಂಬಿ ಸುಖಿಸೋ

**ರಾಗ: ಮಧುವಂತಿ** ಸ ಗ<sup></sup> ಮ ಪ ನಿ ಸ ಸ ನಿ ದ ಪ ಮ ಗ ರಿ ಸ **ಆದಿತಾಳ**

। ಪಾ,ಮಾ,ಪಾ । ಗಾಮಾಗಾ,, । ರೀ, ಸನೀನೀ । ಸರಿರಿ ರೀ,, ॥
**ಎ ಲ್ಲಿಂ ದ ಬಂ ದೆ ಮುಂದೆ ತ್ತ ಪ ಯಣ**

। ಪಾ,ನೀ ನಿನಿ । ಸಾ,ರೀ, ರೀ । ಗಾ,ರೀ,ಸಾ । ಸಾಸಾಸಾ,, ।
**ಇ ಲ್ಲಿ ನಿನ ಗಿ ಷ್ಟು ದಿ ವಾ ಲ ಸ್ಯ ಮರುಳೆ**

। ಗಾ ಗಗ ಗಾಗಾ । ಗಪಮಪ ಗಾಗಾ । ರೀ, ಸ ಸಾನೀ । ರೀ, ರಿ ರೀ ರೀ ।
**ಮಾತೆಯುದರ ದೊ ಳ್ ನವ ಮಾಸ ಮಲ ಮೂತ್ರದೊಳು**

। ನೀ, ನಿನೀನೀ । ಸಾ, ಸ ರೀ ರೀ । ಗಾ, ರಿ ಸನಿಸನಿ । ರೀ,, ,,,, ।
**ಯಾತನೆಯ ಯೋನಿ ಮುಖ ಮಾರ್ಗವಿ ಡಿ ದು**

। ಗಾ, ಮಗಾಗಾ । ಪಾ,ಪ ಗಾಮಾ । ಪಾ,ಪ ಮಾಪಪ । ನೀ,, ನೀ,, ।
**ಭೂತ ಳ ಕೆ ಬಂದ ಹ ದ ನೇ ನ ತೀ ರಿಸಿ ಕೊಂಡೆ**

। ಸಾ,ನಿದಾ ಪ ಮ । ಪಮಪಮಗಾ,, । ರಿ ರೀಸಾ,ನೀ । ರೀರೀರೀ,, ।
**ಜಾತಿಯಾವುದು ನಿ ನ್ನ ಹೆಸ ರೇನು ಮರುಳೆ**

। ಪಾ, ಮಾ,ಗಾ । ಪಮಾಪ ದಾ,, । ಮಪಾ ಗ ಮಾಗಾ । ಮಾ,ಪಾ,ಪಾ ।
**ಮುಂದಾ ದ ಪಥ ವ ಸೇ ರುವೆ ಮರು ಳೆ ಸಾ ಕಿ ನ್ನು**

। ನೀ, ನಿ ದಾಪಾ । ನೀ,ನಿ ಸಾ,, । ನೀ,ನಿ ದಾಪಾ । ಪಾ,,,,,, ।
**ಹಿಂದೆ ನೆ ರ ವಾ ಗಿ ನಿಂ ತಾಪ್ತರುಂ ಟೆ**

। ಗಾ,ಮಪಾ,, । ನಿನೀ ಸಾ,ಸಾ । ನಿ ನೀ,ದಾ,ಪಾ । ನೀ,ನಿ ಸಾಸಾ ।
**ಒಂದುಗೂ ಡಿದ ಪ ತ್ನಿ ಸುತ ರೆ ಲ್ಲ ವ ರ್ಜಿಪರು**

। ನೀ,ಸ ದಾ,, । ಪಮಾಪ ಮಗಗಾ । ರೀ, ಸನೀನೀ । ರೀ, ರಿ ರೀರೀ ।
**ನಿಂದು ಮಾ ತಾ ಡು ಬ ರಿ ದೆ ಬ ಳ ಲಿ ದೆ ಮರುಳೆ**

। ಗಗಾಗಗಾ,, । ಪಮಾ ಗಾ,ಗಾ । ರಿ ರೀಸಾನೀ । ಸರೀರೀ, ರೀ ।
**ಬರವಿದೇ ತಕೆ ನಿ ನ್ನ ಸ್ಥಳ ವೆಲ್ಲಿ ನೆಲೆಗೊಂಡು**

। ನಿನೀ ನಿ ನೀ,, । ಸಸಾಸಾ,ಸಾ । ಗರೀಸನೀಸಾ । ಗಾ,,ಗಾ,, ।
**ಇರುವ ಮಂ ದಿರವಾವು ದದನೆನಗೆ ಹೇ ಳೊ**

। ಮಪಾಮ ಗಾಗಾ । ಮಮಾಪಾ,ಪಾ । ಗಮಾಪನೀನೀ । ನಿಸಾನಿಸಾಸಾ ।
**ಧ ರೆ ಯೊಳ ಗೆ ವ ರ ಕಾ ಗಿ ನೆಲೆ ಯಾದಿ ಕೇ ಶವ ನ**

। ನಿಸಾ ನಿದಾಪಾ । ಪಮಾಪಮಗಗಾ । ರಿಗರಿ ಸಾ,ನೀ । ರೀರೀರೀ,, ॥
**ಸಿರಿ ಚರ ಣ ಕಮ ಲವ ನು ನೆ ರೆ ನಂಬಿ ಸುಖಿಸೊ**

## ಒಂಭತ್ತು ಊರಿಗೆ

ಒಂಭತ್ತು ಊರಿಗೆ ಒಂದೇ ನಾಳವು ಚಂದಮಾಮ
ತುಂಬಿ ನಾಳತುದಿ ತುಂಬಿ ಭಾನು ಪ್ರಭೆ ಚಂದಮಾಮ

ಕದರು ಗಾತರ ಕಂಬ ತೆಕ್ಕೆ ಗಾತರ ಹೂವು ಚಂದಮಾಮ
ಆನೆ ಗಾತರ ಕಾಯಿ ಒಂಟೆ ಗಾತರ ಹಣ್ಣು ಚಂದಮಾಮ

ಕಾಲಿಲ್ಲದಾತನು ಹತ್ತಿದಾ ಮರವನು ಚಂದಮಾಮ
ಕೈಯಿಲ್ಲದಾತನು ಕೊಯ್ದನಾ ಹಣ್ಣನು ಚಂದಮಾಮ
ನೆತ್ತಿಲ್ಲದಾತನು ಹೊತ್ತನಾ ಹಣ್ಣ ಚಂದಮಾಮ
ತಳವಿಲ್ಲದಾಗೂಢೆಯಲಿಳಿಸಿದನು ಹಣ್ಣ ಚಂದಮಾಮ

ಮಾರ್ಗ ತಪ್ಪಿ ಮಾರ್ಗ ಹಿಡಿದು ನಡೆವರು ಚಂದಮಾಮ
ಸದ್ದಿಲ್ಲದಾ ಸಂತೇಳಿಳಿಸಿದರಾ ಹಣ್ಣ ಚಂದಮಾಮ
ರೊಕ್ಕವಿಲ್ಲದಾತ ಕೊಂಡನಾ ಹಣ್ಣ ಚಂದಮಾಮ
ಮೂಗಿಲ್ಲದಾತ ಮೂಸಿದನಾ ಹಣ್ಣ ಚಂದಮಾಮ

ಕಣ್ಣಿಲ್ಲದಾತನು ಕೆಂಪಾನೆ ಹಣ್ಣೆಂದ ಚಂದಮಾಮ
ಅಂಗುಳಿಲ್ಲದಾತ ನುಂಗಿದನಾ ಹಣ್ಣ ಚಂದಮಾಮ
ಬಾಯಿಲ್ಲದಾತ ತಿಂದು ಬಸಿರಲಿಂಬಿಟ್ಟ ಚಂದಮಾಮ
ಸುಲಭ ಪದವಿದು ನಳಿನಜಾಂಡದೊಳು ಚಂದಮಾಮ

ಗುರುವಿನ ಮಹಿಮೆ ಗುರುವೆ ತಾ ಬಲ್ಲನು ಚಂದಮಾಮ
ಮೂಢನಾದವನೇನು ಬಲ್ಲನು ಈ ಮಾತ ಚಂದಮಾಮ
ಕನಕನಾಡಿದ ಗುಟ್ಟು ಆದಿಕೇಶವಬಲ್ಲ ಚಂದಮಾಮ
ತಿಳಿದವರು ಪೇಳಿರೀ ಹಳೆಗನ್ನಡದ ಚಂದಮಾಮ

**ರಾಗ: ಅದಿತಿ** ಸ ರಿ<sup></sup> ಮ<sup></sup> ಪ ನಿ ಸ ಸ ನಿ ಪ ಮ ಗ ರಿ ಸ **ಖಂಡ ಛಾಪು**

। ಸಾ ರೀಸ । ಸಾ ಸರಿಸ । ಸರಿಮಾ, । ಗಾರಿಸಾ । ಸಾ ರಿಮಾ । ಮಾ,,,। ಪಾ ನಿಪಾ । ಪಾ,,, ।
**ಒಂಭತ್ತು ಊರಿಗೆ ಒಂದೇ ನಾಳವು ಚಂದಮಾ ಮ ಚಂದಮಾ ಮ**
। ಮಾಮಾ, । ಮಾಮಮಮ । ಮಾಪಾಮ । ರೀ ರಿ ರಿ ರಿ । ನೀ ಸ ರೀ । ರೀ,,, । ನೀ ನಿಸಾ । ಸಾ,,,।
**ತುಂಬಿ ನಾ ಳ ತುದಿ ತುಂಬಿ ಭಾನು ಪ್ರಭೆ ಚಂದಮಾ ಮ ಚಂದಮಾ ಮ**

। ನಿಪನಿ ನಿಸ । ಸಸ ಸಾ ಸ । ರೀರಿ ರಿಸ । ಸಸ ಸಾ ಸ । ಸಾ ರಿಮಾ । ಮಾ,,, । ಗಾ ರಿ ಸರಿ । ಮಾ,,, ।
**ಕದರು ಗಾ ತರ ಕಂಬ ತೆಕ್ಕೆ ಗಾ ತರ ಹೂವು ಚಂದಮಾ ಮ ಚಂದಮಾ ಮ**
। ಪಾನಿ ಪಾ । ಮಪ ಮಾಮ । ಮಾಪ ಮಾ । ಗಗ ರೀಸ । ನೀ ಸ ರೀ । ರೀ,,, । ನೀ ನಿಸಾ । ಸಾ,,, ।
**ಆನೆ ಗಾ ತ ರ ಕಾ ಯಿ ಒಂಟೆ ಗಾ ತರ ಹಣ್ಣು ಚಂದಮಾ ಮ ಚಂದಮಾ ಮ**

। ಪಾನೀನಿ । ನೀ ನಿನೀ । ನೀಸ ನಿಸ । ನಿ ಪಪಪಾ । ಮಾಮಪಾ । ಪಾ,,, । ನೀ ನಿಪಾ । ಪಾ,,, ।
**ಕಾಲಿಲ್ಲ ದಾತನು ಹತ್ತಿದಾ ಮರವನು ಚಂ ದ ಮಾ ಮ ಚಂದಮಾ ಮ**
। ನೀಸಾ ಸ । ನಿಸನಿಪಾ । ಪಾ ಮ ಪಾ । ಮಾಪ ನೀ । ಮಾಮಪಾ । ಪಾ,,, । ನೀ ಸ ರೀ । ಸಾ,,, ।
**ಕೈಯಿಲ್ಲ ದಾತನು ಕೊಯ್ದನಾ ಹ ಣ್ಣನು ಚಂದಮಾ ಮ ಚಂದಮಾ ಮ**
। ನಿಪನೀನಿ । ಸಾ ಸಸಾ । ರೀ ರಿ ರೀ । ಸಾಸಾ, । ಸಾ ರಿಮಾ । ಮಾ,,, । ಗಾ ರಿ ಸರಿ । ಮಾ,,, ।
**ನೆ ತ್ತಿಲ್ಲ ದಾತನು ಹೊತ್ತನಾ ಹ ಣ್ಣ ಚಂದಮಾ ಮ ಚಂದಮಾ ಮ**
। ಪಪನೀಪ । ಮಪ ಮರಿರಿ । ಮಮ ಪಮಮ । ರಿಮ ರಿಸಸ । ನೀ ಸ ರೀ । ರೀ,,, । ನೀ ನಿ ಸಾ । ಸಾ,,, ।
**ತಳವಿ ಲ್ಲ ದಾ ಗೂ ಢೆ ಯಲಿ ಇಳಿ ಸಿ ದನು ಹ ಣ್ಣ ಚಂದಮಾ ಮ ಚಂದಮಾ ಮ**
**ಮೇಲಿನಂತೆ**

**ಮಾರ್ಗ ತಪ್ಪಿ ಮಾರ್ಗ ಹಿಡಿದು ನಡೆವರು ಚಂದಮಾಮ**
**ಸದ್ದಿಲ್ಲದಾ ಸಂತೇಳಿಳಿಸಿದರಾ ಹಣ್ಣ ಚಂದಮಾಮ**
**ರೊಕ್ಕವಿಲ್ಲದಾತ ಕೊಂಡನಾ ಹಣ್ಣ ಚಂದಮಾಮ**
**ಮೂಗಿಲ್ಲದಾತ ಮೂಸಿದನಾ ಹಣ್ಣ ಚಂದಮಾಮ**

**ಕಣ್ಣಿಲ್ಲದಾತನು ಕೆಂಪಾನೆ ಹಣ್ಣೆಂದ ಚಂದಮಾಮ**
**ಅಂಗುಳಿಲ್ಲದಾತ ನುಂಗಿದನಾ ಹಣ್ಣ ಚಂದಮಾಮ**
**ಬಾಯಿಲ್ಲದಾತ ತಿಂದು ಬಸಿರಲಿಂಬಿಟ್ಟ ಚಂದಮಾಮ**
**ಸುಲಭ ಪದವಿದು ನಳಿನಜಾಂಡದೊಳು ಚಂದಮಾಮ**

**ಗುರುವಿನ ಮಹಿಮೆ ಗುರುವೆ ತಾ ಬಲ್ಲನು ಚಂದಮಾಮ**
**ಮೂಢನಾದವನೇನು ಬಲ್ಲನು ಈ ಮಾತ ಚಂದಮಾಮ**
**ಕನಕನಾಡಿದ ಗುಟ್ಟು ಆದಿಕೇಶವಬಲ್ಲ ಚಂದಮಾಮ**
**ತಿಳಿದವರು ಪೇಳಿರೀ ಹಳೆಗನ್ನಡದ ಚಂದಮಾಮ**

## ಕನಕದಾಸನ ಮೇಲೆ ದಯಮಾಡಲು ವ್ಯಾಸ

ಕನಕದಾಸನ ಮೇಲೆ ದಯಮಾಡಲು ವ್ಯಾಸ
ಮುನಿ ಮಠಿಕರೆಲ್ಲರೂದೂರುತಿಹರೊ

ತೀರ್ಥವನು ಕೊಡುವಾಗ ಕನಕನ್ನ ಕರೆಯೆನಲು
ಧೂರ್ತರಾಗಿದ್ದ ವಿದ್ವಾಂಸರೆಲ್ಲ
ಸಾರ್ಥಕವಾಯ್ತು ಇವರ ಸನ್ಯಾಸಿತನವೆಲ್ಲ
ಪೂರ್ತ್ಯಾಗಲೆಂದು ಯತಿ ನಗುತಲಿಹನು

ಮರುದಿನ ಅವರವರ ಪರೀಕ್ಷಿಸಬೇಕೆಂದು
ಕರೆದು ವಿದ್ವಾಂಸರ ಕನಕ ಸಹಿತ
ತ್ವರಿತದಲಿ ಕರದಲ್ಲಿ ಕದಳಿ ಫಲವನೆ ಕೊಟ್ಟು
ಯಾರಿರದ ಸ್ಥಳದಲ್ಲಿ ಮೆದ್ದು ಬನ್ನಿರಿ ಎನಲು

ಊರ ಹೊರಗೆ ಹೋಗಿ ಬ್ಯಾರೆ ಬ್ಯಾರೆ ಕುಳಿತು
ತ್ವರಿತದಿಂ ಮೆದ್ದು ವಿದ್ವಾಂಸರೆಲ್ಲ
ತೋರಲಿಲ್ಲವು ಎನಗೆ ಏಕಾಂತ ಸ್ಥಳವೆನುತ
ಸಾರಿ ಕದಳಿ ಫಲವ ತಂದು ಮುಂದಿಟ್ಟ

ಡಿಂಬದಲಿ ಶಬ್ದವಾಗಾದಿ ಶ್ರೋತೃಗಳಲ್ಲಿ
ಇಂಬಾಗಿ ತತ್ವೇಶರೆಲ್ಲ ತುಂಬಿಹರು
ತಿಂಬುವುದು ಹ್ಯಾಂಗೆನುತ ವ್ಯಾಸರಾಯರ ಕೇಳೆ
ಕಂಬದಂತಾದರವರೆಲ್ಲ ಕುಳಿತಿಹರು

ಮಾಣಿಕವು ಕೋಡಗನ ಕೈಯಲ್ಲಿ ಇದ್ದಂತೆ
ಕೋಣನಿದಿರಿಗೆ ಕಿನ್ನರಿಯ ಮೀಟಿದಂತೆ
ವೇಣು ಧ್ವನಿ ಬಧಿರನ ಬಳಿ ಹೊರಡಿಸಿದಂತೆ ಕಣ್
ಕಾಣದವನಿಗೆ ಕನ್ನಡಿಯ ತೋರಿದಂತೆ

(ಮುಂದುವರೆದಿದೆ)

ರಾಗ: ಶ್ರೀರಾಗ ಸ ರಿ ಮ ಪ ನಿ ಸ ಸ ನಿ ಪ ದ ನಿ ಪ ಮ ರಿ ಗ ರಿ ಸ ಖಂಡ ಛಾಪು

। ಮರಿಮಪಾ । ಪಪ ಪನಿಪ । ಮಪ ನೀ ನಿ । ಸಾ ಸಾ ಸ ॥ ಪ ದ ನಿ ಪಮ । ರೀಗ ರಿಸ । ನಿಪ ಪ ಸನಿ । ರೀ,,, ।
**ಕ ನಕ ದಾ ಸನ ಮೇಲೆ ದಯಮಾಡ ಲು ವ್ಯಾಸ ಮುನಿ ಮಠಿಕ ರೆಲ್ಲರೂ ದೂರುತಿಹ ರೊ**

। ರಿ ಮ ಪ ನಿಪ । ಮರಿಗ ರೀ । ಸನಿ ಪ ಸನಿ । ಸಾ,,, ।
**ಮುನಿ ಮಠಿಕ ರೆ ಲ್ಲರೂ ದೂರುತಿಹ ರೊ**

। ಮರಿಮ ಪಪ । ಪ ನಿ ಸನಿನಿ । ಪದನೀಪ । ಸನಿಸ ಸಸ ॥ ರೀ ಗ ರೀ । ಸಾಸ ನಿಪ । ಪಾ ಪಸನಿ । ಸಾ,,, ।
**ತೀ ರ್ಥವನು ಕೊಡುವಾಗ ಕನಕ ನ್ನ ಕರೆಯೆನಲು ಧೂರ್ತರಾ ಗಿದ್ದ ವಿ ದ್ವಾಂಸರೆ ಲ್ಲ**

। ಪದನಿ ಪಾ । ನೀಪ ಪಮ । ಪಮಪಮರಿ । ರಿಮಪಾಪ । ಪದನಿಪ ಮ । ರೀ ಗ ರಿ ಸ । ನಿನಿ ಪಸನಿ । ಸಾ,,, ।
**ಸಾ ರ್ಥಕ ವಾಯ್ತಿವರ ಸ ನ್ಯಾ ಸಿ ತನ ವೆ ಲ್ಲ ಪೂರ್ತ್ಯಾಗ ಲೆಂದು ಯತಿ ನಗುತಲಿಹ ನು**

। ಪ ಮಪಮಾ । ಗರಿ ಗ ರಿ ಸ । ಸಸಾನಿಪ । ಸನಿಸಾ ಸ ॥ ಸನಿಸ ರೀ । ರೀ ಗರೀ । ಗರಿಸ ರಿಮ । ಪಾ,,, ।
**ಮರುದಿನ ಅವರವರ ಪರೀಕ್ಷಿಸ ಬೇಕೆಂದು ಕರೆದು ವಿ ದ್ವಾಂಸರ ಕನಕ ಸಹಿ ತ**

। ಮರಿಮಪನಿ । ಪನಿಸಾಸ । ನಿಸರಿ ರಿ ರಿ । ಗ ರಿ ಗರಿ ಸ ॥ ಪದ ನಿಪಮ । ರಿ ರಿಗರಿಸ । ಸನಿಪ ಸನಿ । ಸ ಸ ಸ ಸಸ ।
**ತ್ವರಿತ ದಲಿ ಕರದಲ್ಲಿ ಕದಳಿ ಫಲ ವನೆ ಕೊಟ್ಟು ಯಾರಿರದ ಸ್ಥಳದ ಲ್ಲಿ ಮೆದ್ದು ಬ ನ್ನಿರಿ ಎನಲು**

। ರೀ ಮ ಪ ನಿ । ಪಾ ಪಾ ಪ । ಮಾಮ ಪನಿ । ಪಾ ಪ ಪಪ ॥ ರಿಮಪನೀ । ನೀ ನಿ ನಿಪ । ಪಾ ಪಸನಿ । ಸಾ,,, ।
**ಊರ ಹೊರ ಗೆ ಹೋಗಿ ಬ್ಯಾರೆ ಬ್ಯಾ ರೆ ಕುಳಿತು ತ್ವರಿತದಿಂ ಮೆದ್ದು ವಿ ದ್ವಾಂಸರೆ ಲ್ಲ**

। ರೀ ಗರೀ । ರಿ ರಿ ಗ ರಿಸ । ಸಾನೀ ಪ । ಸ ನಿಸ ಸ ಸ ॥ ಸಾರಿ ಸನಿ । ಪದ ನಿಪಮ । ರೀ ಗ ರಿಸ । ರೀಸಾ, ।
**ತೋರಲಿ ಲ್ಲವು ಎನಗೆ ಏ ಕಾಂತ ಸ್ಥಳವೆನುತ ಸಾರಿ ಕದ ಳಿ ಫಲವ ತಂದು ಮುಂ ದಿ ಟ್ಟ**

। ಪಾ ಪಮಮ । ಪಪ ಮಾ । ಪಾನಿ ಪಾ । ಮಮಪಾಪ ॥ ನೀ ನೀನಿ । ನೀನೀ ಪ । ಪಾಪ ಸನಿ । ಸಸ ಸಾ, ।
**ಡಿಂಬದ ಲಿ ಶಬ್ದ ವಾ ಗಾದಿ ಶ್ರೋ ತ್ರಗ ಳ ಲ್ಲಿ ಇಂಬಾಗಿ ತ ತ್ವೇಶ ರೆ ಲ್ಲ ತುಂ ಬಿಹರು**

। ರೀ ರಿ ರಿ ರಿ । ರೀ ಗರಿ ಸ । ಸಾ ಸನಿಪ । ಸ ನಿ ಸಾಸ ॥ ಪದನಿಪಾ । ಮಾಪಮಮ । ರೀಗ ರಿ ಸ । ನಿಪಸಾ, ।
**ತಿಂಬುವುದು ಹ್ಯಾಂಗೆನುತ ವ್ಯಾಸರಾ ಯರ ಕೇಳೆ ಕಂ ಬದಂ ತಾ ದರ ವ ರೆಲ್ಲ ಕುಳಿ ತಿಹರು**

। ಮಾ ರಿ ಗರಿ । ಸಾ ರಿ ಮಮ । ಪಾಪಾಪ । ನೀಪಾ ಪ ॥ ರೀ ಮಪನಿ । ನಿನಿ ನೀಪ । ಮಪ ಸಾ ನಿ । ಸಾ ಸಾ, ॥
**ಮಾಣಿಕವು ಕೋಡಗ ನ ಕೈಯಲ್ಲಿ ಇದ್ದಂತೆ ಕೋಣ ನಿದಿ ರಿಗೆ ಕಿ ನ್ನ ರಿ ಯ ಮೀಟಿ ದಂತೆ**

। ರೀ ರಿ ರಿ ರಿ । ರಿ ರಿ ಗರೀ । ಸರಿ ಗ ರಿಸ । ನಿಪನಿಸಾ ॥ ಪದ ನಿಪಮ । ರಿ ಗ ರಿಸಾ । ನಿಪಸ ನಿಸಾ । ಸ ನಿಸಾ ಸಾ ।
**ವೇಣು ಧ್ವನಿ ಬಧಿರನ ಬಳಿ ಹೊರಡಿ ಸಿದಂತೆ ಕಣ್ ಕಾ ಣ ದವನಿಗೆ ಕ ನ್ನಡಿಯ ತೋರಿದಂತೆ**

**(ಮುಂದುವರೆದಿದೆ)**

(ಮುಂದುವರೆದುದು)

ನೋಡಿದಿರ ಈ ಕನಕನಾಡುವ ಮಾತುಗಳ
ಮೂಢ ಜನರರಿಯಬಲ್ಲರೆ ಮಹಿಮೆಯ
ನಾಡಾಡಿಯಂತೆಯೆ ಮಾಡಿಬಿಟ್ಟರು ಇವಗೆ
ನಾಡೆಲ್ಲ ಹುಡುಕಿದರು ಈಡಾರ ಕಾಣೆ

ಕರದಲ್ಲಿ ಮೂರ್ತಿಯ ಪಿಡಿದು ಕೇಳುತ್ತಿರಲು
ಅರಿಯದಜ್ಞಾನದಲಿ ಪೇಳುತಿರಲು
ತ್ವರದಿ ಕನಕನು ಬಂದು ವಾಸುದೇವನ ರೂಪ
ಪರಬೊಮ್ಮ ಸಿರಿಯಾದಿ ಕೇಶವನೆಂದ

(ಮುಂದುವರೆದುದು)

। ರೀ ಗರಿಸ । ಸಾ ರಿಸನಿ । ನೀಸ ನಿಪ । ಸನಿ ಸ ಸಸ ॥ ರೀ ಮ ಪಪ । ಪನಿಪ ಮಾ । ಪಮ ರಿ ರಿ ಸ । ರೀ,,, ।
**ನೋಡಿದಿರ ಈ ಕನಕ ನಾಡುವ ಮಾತುಗಳ ಮೂಢ ಜನ ರರಿಯಬ ಲ್ಲರೆ ಮಹಿಮೆ ಯ**

। ರಿಮಪನಿನಿ । ನೀ ನಿ ನೀ । ನಿಪ ಪಸನಿ । ಸ ಸ ಸ ಸಸ ॥ ರೀಗರಿಸ । ಪ ದ ನಿಪಮ । ರಿಮಪಮರಿ । ಮಾಪಾ, ।
**ನಾ ಡಾಡಿ ಯಂತೆಯೆ ಮಾಡಿಬಿ ಟ್ಟರು ಇವಗೆ ನಾಡೆ ಲ್ಲ ಹುಡುಕಿದರು ಈ ಡಾ ರ ಕಾ ಣೆ**

। ಮರಿಮಾಮ । ಪಾ ಪ ಪಾ । ಪಪಪ ಪಾ । ನೀಪಮಪ ॥ ರಿಮಪ ನೀ । ನೀ ನಿನಿ ನಿ । ಪಮಪ ಸನಿ । ಸಾ,,, ।
**ಕ ರದ ಲ್ಲಿ ಮೂರ್ತಿಯ ಪಿಡಿದು ಕೇ ಳುತ್ತಿರಲು ಅರಿಯದ ಜ್ಞಾನದಲಿ ಪೇ ಳುತಿರ ಲು**

। ರಿ ಗರಿ ಸರಿ । ಗರಿ ಸಾ ಸ । ಸಾ ಸ ನಿಪ । ಸನಿ ಸಾ ಸ । ಪದನಿಪ ಮ । ರಿರಿಗರಿ ಸ । ಸಾಸನಿಪ । ಸನಿಸಾ, ।
**ತ್ವರದಿ ಕನ ಕನು ಬಂದು ವಾಸುದೇ ವನ ರೂಪ ಪರಬೊಮ್ಮ ಸಿರಿಯಾದಿ ಕೇಶವ ನೆಂದ**

# ಕಾಯೊ ಎನ್ನನು ದೇವ

ಕಾಯೊ ಎನ್ನನು ದೇವ ಕಡೆಹಾಯಿಸೊ ಕಡಲೊಡೆಯ
ಕಾಯಯ್ಯ ನೀ ಎನ್ನ ಕಮಲದಳಾಕ್ಷ

ಒಂದುಕಾಯಲಿ ನಾನು ಒಲಿದು ದಂಡಿಗೆಯಾದೆ
ಎರಡು ಕಾಯಲಿ ನಾನು ವೀಣೆಯಾದೆ
ಮೂರು ಕಾಯಲಿ ನಾನು ಮುದ್ದು ಕಿನ್ನರಿಯಾದೆ
ನೀಟಾದ ಕಾಯಲಿ ನಾಗಸ್ವರವಾದೆ

ದಪ್ಪ ದಪ್ಪ ಕಾಯಲಿ ದರವೇಶಿಗಳಿಗಾದೆ
ಮಿಕ್ಕ ಕಾಯಲಿ ನಾನು ಸನ್ನೇಸಿಗಳಿಗಾದೆ
ಕೈತಪ್ಪಿ ಬಿದ್ದರೆ ಕದಿರಿಗೆ ಬಿಲ್ಲಾದೆ
ಮತ್ತೆ ದೇವರ ಗುಡಿಗೆ ದೀಪವೇ ನಾನಾದೆ

ಚಿಕ್ಕಂದು ಮೊದಲು ನಾ ಸಾಸೂವೆ ಕಾಯಾದೆ
ಚಿಕ್ಕ ಚಿನ್ಮಯಿಗೆ ಬುರುಡೆಯಾದೆ
ಉಕ್ಕುವಾ ಹೊಳೆಯಲ್ಲಿ ತೆಪ್ಪವೇ ನಾನಾದೆ
ಚೊಕ್ಕ ಕನಕಪ್ಪನ ಹಿಂದೆ ನಾ ತಿರುಪತಿಗೆ ಬಂದೆ

ರಾಗ: ಸಿಂಧುಭೈರವಿ ಸ ರಿ² ಗ² ಮ¹ ಪ ದ¹ ನಿ² ಸ ಅನ್ಯಸ್ವರ ರಿ೨ ತ್ರಿಶ್ರನಡೆ ಆದಿತಾಳ

। ಪಾಪ ದಪಮಪ । ಗಪಮಾ ಗಸ । ಸಗಪ ಮ ರಿಗ । ಸ ರಿ ಸಾ ।
ಕಾಯೊ ಎ ನ್ನನು ದೇ ವ ಕಡೆ ಹಾಯಿಸೊ ಕಡ ಲೊಡೆಯ

। ಗಾಗಾಗಾ । ಪಮ ಗಾಗಾ । ಪದ ಪಮಗಾ । ಪಾ,,,, ।
ಕಾಯಯ್ಯ ನೀ ಎ ನ್ನ ಕಮಲದಳಾ ಕ್ಷ

। ಮಾಮ ಮಾ, । ಮ ಗ ಪಾಪಾ । ದದದಾ ಪಮ । ಪಪಪಾ ಪಾ ।
ಒಂದು ಕಾ ಯಲಿ ನಾನು ಒಲಿದು ದಂ ಡಿಗೆಯಾದೆ

। ನಿನಿನಿ ನೀ, । ದ ನಿ ದಪಪಾ । ಗಾಮಪದಾ । ಪಾ,,,, ।
ಎರಡು ಕಾ ಯಲಿ ನಾ ನು ವೀಣೆಯಾ ದೆ

। ಸಂ ಸಂ ಸಾಂ, । ನಿ ಸಂ ದಾದಾ । ಪಾ ದಾ ನೀ । ದ ನಿ ಸಾಂ ಸಾಂ ।
ಮೂರು ಕಾ ಯಲಿ ನಾನು ಮುದ್ದು ಕಿ ನ್ನರಿಯಾದೆ

। ಗಾಪದಸಸ । ನಿದನಿದಪಾ । ಗಾಮಾದಪ । ಗರಿಗರಿಸಾ ।
ನೀ ಟಾದ ಕಾ ಯಲಿ ನಾಗ ಸ್ವರ ವಾ ದೆ

। ದಾದ ದಾದ । ಪಾದ ಪಮಗ । ಸಗದಪಪಮ । ಗರಿಗರಿಸಾ ।
ದ ಪ್ಪ ದ ಪ್ಪ ಕಾಯಲಿ ದರವೇ ಶಿ ಗಳಿಗಾದೆ

। ಮಾಮ ಮಾ, । ಮ ಗ ಪಾಪಾ । ದಾದಾ,ದ । ದನಿದಪಪಾ ।
ಮಿ ಕ್ಕ ಕಾ ಯಲಿ ನಾನು ಸ ನ್ನೇ ಸಿ ಗಳಿಗಾ ದೆ

। ಪದನೀ,ದ । ಸಾಂಸಂಸಾಂ, । ಸಂರಿಂಸಂನಿದಾ । ಸಾಂಸಾಂ ಸಾಂ ।
ಕೈ ತ ಪ್ಪಿ ಬಿದ್ದರೆ ಕದಿರಿಗೆ ಬಿ ಲ್ಲಾದೆ

। ಪಾದಸಂ ಸಾಂ । ದನಿ ದಪಮಾ । ಸಾ ರಿ ಗಪಮ । ರಿಗಸರಿಸಾ ।
ಮತ್ತೆ ದೇ ವರ ಗುಡಿಗೆ ದೀಪವೇ ನಾ ನಾದೆ

। ಮಾಮಾಮಾ । ಮ ಗ ಗ ಪಾ, । ದಾದಾದಾ । ಮಗಪಾ ಪಾ ।
ಚಿ ಕ್ಕಂ ದು ಮೊದಲು ನಾ ಸಾಸೂವೆ ಕಾ ಯಾದೆ

। ನೀನೀ,, । ದನಿದ ಪ ಪಾ । ಗ ಗ ಮಪಾ, । ದಾ, ,,, ।
ಚಿ ಕ್ಕ ಚಿ ನ್ಮಯಿಗೆ ಬುರುಡೆಯಾ ದೆ

। ಸಾಂ ಸಂ ಸಾಂ, । ನಿ ಸಂದನಿಪಾ । ಪಾದನೀ, । ದನಿದಪಪಾ ।
ಉಕ್ಕುವಾ ಹೊಳೆಯಲ್ಲಿ ತೆಪ್ಪವೇ ನಾ ನಾ ದೆ

। ಗಾ ಪಾ ದನಿ । ಪದಪ ಗಮಗ । ಸಗ ಮಪಮಮ । ಗರಿಗ ಸರಿ ಸ ।
ಚೊಕ್ಕ ಕನ ಕಪ್ಪನ ಹಿಂದೆ ನಾ ತಿ ರುಪತಿ ಗೆ ಬಂದೆ

# ತಾನ್ಯಾರು ದೇಹವ್ಯಾರು

ತಾನ್ಯಾರು ದೇಹವ್ಯಾರು – ನವ್ಯ
ಜ್ಞಾನದಲಿ ತಿಳಿದಾತ ಪರಮಯೋಗಿ

ಸೂತಿಕಾವಸ್ಥೆಯಲಿ ನವಮಾಸ ನೆರೆದಾಗ
ಮಾತೆಯುದರದಿ ಬಂದು ಬೆಳೆದು ನಿಂದು
ಪಾತಕವದೊಂದು ಮೂರುತಿಯಾದ ತನುವೆಂದು
ನೀತಿಯಲಿ ತಿಳಿದಾತ ಪರಮಯೋಗಿ

ಅಸ್ಥಿಪಂಜರ ನರಗಳ ತೊಗಲ ಹೊದಿಕೆಯ
ವಿಸ್ತರಿಸಿ ಬಿಗಿದ ಮಾಂಸದ ಬೊಂಬೆಯು
ರಕ್ತ ಮಲ ಮೂತ್ರ ಕೀವಿನ ಪ್ರಳಯ ದೊಡಲೆಂದು
ಸ್ವಸ್ಥದಿಂ ತಿಳಿದಾತ ಪರಮಯೋಗಿ

ಘೋರ ನರಕದ ತನುವು ಎಂದು ಮನದಲಿ ತಿಳಿದು
ಗೇರು ಹಣ್ಣಿನ ಬೀಜದಂತೆ ಹೊರಗಿದ್ದು
ಮಾರಪಿತ ಕಾಗಿನೆಲೆಯಾದಿಕೇಶವ ಪಾದ
ವಾರಿಜವ ನೆನೆದವನೆ ಪರಮಯೋಗಿ

ರಾಗ: ದುರ್ಗ ಸ ರಿ ಮ ಪ ದ ಸ ಸ ದ ಮ ರಿ ಸ ಖಂಡ ಛಾಪು

। ದಸಸಾ ಸ । ರೀಮಪಾ । ದಾ,,, । ,,ಮಾಪ । ದಸ ದಸಸ । ಸದದಮಮ । ದಪದ ಮಾ । ಮರಿಮರಿಸ ॥
ತಾ ನ್ಯಾರು ದೇಹವ್ಯಾ ರು ನ ವ್ಯ ಜ್ಞಾನದಲಿ ತಿಳಿದಾ ತ ಪರಮಯೋ ಗಿ

। ದಾ ದಮಪ । ದಸಸ ಸ ದ । ದಸದಸ ಸ । ಸರಿ ಸರಿರಿ ।
ಸೂತಿಕಾ ವ ಸ್ಥೆಯಲಿ ನವಮಾಸ ನೆರೆದಾಗ

। ದಾ ರಿರಿ ಸ । ಸದ ದಪಪ । ಮಪದ ಮಾ । ಪಾ,,, ।
ಮಾತೆಯುದ ರದಿ ಬಂದು ಬೆಳೆದು ನಿಂ ದು

। ದಾದದಪ । ದಾ ದ ಮಾ । ರಿಮರಿಮಮ । ಸರಿ ರಿಸ ಸ ।
ಪಾತಕವ ದೊಂದು ಮೂ ರುತಿಯಾದ ತನುವೆಂದು

। ದಸಸಸ ಸ । ರಿಮಮಾಮ । ದಪದ ಮಾ । ರೀಸರಿಸ ।
ನೀತಿಯಲಿ ತಿಳಿ ದಾ ತ ಪರಮಯೋ ಗಿ

। ದಾದ ಪದ । ಮಮ ರಿಮಮ । ರಿಮ ರಿ ಸಸ । ರಿ ಮಮಮಾ ।
ಅ ಸ್ಥಿಪಂ ಜ ರ ನರ ಗ ಳ ತೊಗಲ ಹೊದಿ ಕೆ ಯ

। ದಾದದದ । ಪದದ ಮಾ । ಪಪ ದಾ ಸ । ದಾ,,, ।
ವಿ ಸ್ತರಿಸಿ ಬಿಗಿದ ಮಾಂ ಸದ ಬೊಂಬೆ ಯು

। ದಾಸ ಸ ರಿ । ಮರಿರಿ ಸಾ । ರಿಸ ರಿ ಸದ । ಮ ಪದಸಸ ।
ರ ಕ್ತ ಮಲ ಮೂತ್ರ ಕೀ ವಿನ ಪ್ರಳಯ ದೊಡಲೆಂದು

। ರೀಸದಾ । ಸದಮಾಮ । ಮರಿಮರೀ । ಸಾ,,, ।
ಸ್ವಸ್ಥದಿಂ ತಿಳಿದಾ ತ ಪರಮಯೋ ಗಿ

। ದಾ ದ ಮಪ । ದಸ ಸಸ ಸ । ದಾ ಸ ಸ ರಿ । ಸರಿ ಸರಿರಿ ।
ಘೋರ ನ ರ ಕದ ತನುವು ಎಂದು ಮನ ದಲಿ ತಿಳಿದು

। ದಾರಿ ರಿಸ । ಸ ದ ಸದಪ । ಮಪದ ಮ ಮ । ಪಾಪಾ, ।
ಗೇರು ಹ ಣ್ಣಿನ ಬೀಜ ದಂ ತೆ ಹೊರ ಗಿ ದ್ದು

। ದಾ ದಪಪ । ದಾದಮಮ । ರಿಮರಿಮಾ । ರಿಸ ರಿಸಸ ।
ಮಾರಪಿತ ಕಾಗಿ ನೆ ಲೆ ಯಾದಿಕೇ ಶವ ಪಾದ

। ದಸಸಸಸ । ರಿಮಮಪದ । ದಪದ ಮಾ । ರೀಸರಿಸ ।
ವಾರಿಜವ ನೆನೆ ದ ವನೆ ಪರಮಯೋ ಗಿ

## ನನ್ನವ್ವ ಕಲ್ಲ ಬಿಡೆ ಈ ಧೋತ್ರವ

ನನ್ನವ್ವ ಕಲ್ಲ ಬಿಡೆ ಈ ಧೋತ್ರವ
ಚೆನ್ನಾಗಿ ಒಗೆಯಬೇಕು

ಮುನ್ನ ಮಾಡಿದ ಪಾಪ ಕರ್ಮ ಹೊಗುವ ಹಾಗೆ
ಚೆನ್ನಕೇಶವನ ಪ್ರಸಾದಕ್ಕೊದಗಬೇಕು

ಉಟ್ಟ ಧೊತ್ರವು ಮಾಸಿತು–ಮನದೊಳಗಿರುವ
ದುಷ್ಟರೈವರುಗಳಿಂದ ಕಷ್ಟದುರಿತಗಳು
ಬಿಟ್ಟು ಹೋಗುವ ಹಾಗೆ ಮುಟ್ಟಿ ಜಲದೊಳು
ಗಟ್ಯಾಗಿ ಒಗೆಯಬೇಕು

ವೇದವನೋದಬೇಕು ಮನದೊಳಗಿದ್ದ
ಭೇದವ ಕಳೆಯಬೇಕು
ಸಾದರಣೆಯಿಂದ ತಿಳಿದು ನಿಶ್ಚಯವಾಗಿ
ಕ್ರೋಧ ಕರ್ಮಗಳೆಲ್ಲ ಬಿಟ್ಟು ಹೋಗುವ ಹಾಗೆ

ವೇಳಾಪುರದ ಚೆನ್ನಕೇಶವನ ಸೇವೆಗೆ
ಆಲಸ್ಯವನು ಮಾಡದೆ
ಕೋಲ ಹಿಡಿದು ದ್ವಾರಪಾಲಕನಾಗುವೆ
ನೀಲ ಕುಂತಳೆ ಕಲ್ಲಬಿಟ್ಟು ಈ ಕಡೆಗೆ

**ರಾಗ: ಕದರ(ಶಿವರಂಜನಿ)** ಸ ರಿ ಗ ಪ ದ ಸ + ಗ **ಖಂಡ ಛಾಪು**

। ಪದದಸಸ । ಗರಿಗ ರಿ ಸ । ,ಪದದಸಸ । ಗರಿಗ ರಿ ಸ ।
**ನ ನ್ನವ್ವ ಕ ಲ್ಲಬಿಡೆ ನ ನ್ನ ವ್ವ ಕ ಲ್ಲ ಬಿಡೆ**

। ದಸ ರೀ ಗ । ರೀ,,, । **ಗಾಗಾ**ಪ । ಗ ರಿಗ ರಿಸ । ಸಾ,,, ।
**ಈ ಧೋತ್ರ ವ ಚೆ ನ್ನಾಗಿ ಒಗೆಯಬೇ ಕು**

। ಪಾ ಪ ದಪ । ಪಪ ಪಾಪ । ಸಾರಿ ಗಾ । ಪಪ ಪಾಪ ।
**ಮುನ್ನ ಮಾ ಡಿದ ಪಾಪ ಕ ರ್ಮ ಹೋ ಗುವ ಹಾಗೆ**

। ಪಾಪದಸ । ಸಸಸಾ ಪ । ದಾಪಾಗ । ರಿ ಗರಿಸಸ ।
**ಚೆನ್ನಕೇ ಶವನ ಪ್ರ ಸಾದ ಕ್ಕೊ ದಗಬೇಕು**

। ಗಾಗ ರಿಸ । ಸ ಸ ರೀ ಸ । ರೀ,,, । ಗ ರಿ ಗ ರಿಸ ।
**ಉಟ್ಟ ಧೊ ತ್ರವು ಮಾಸಿ ತು ಮನದೊಳಿಹ**

। ಗಾ ಗ ಗಾ । ಗ ರಿ ಗರಿಸ । ಸಾ,,, । ,,,,, ।
**ದುಷ್ಟರ್ಕೈ ವರುಗಳಿಂ ದ**

। ಪಾಪ ಪ ಪ । ದಪಪಾ, । ಸಾರಿ ಗಾ । ಪ ಪ ಪಾಪ ।
**ಕ ಷ್ಟ ದುರಿ ತಗಳು ಬಿಟ್ಟು ಹೋ ಗುವ ಹಾಗೆ**

। ಸಾ ಸ ದಪ । ದ ಪ ಪಾ, । ರೀ ಗ ರಿಸ । ರಿಸಸಾ ಸ ।
**ಮುಟ್ಟಿ ಜಲ ದೊಳು ಗ ಟ್ಯಾಗಿ ಒಗೆ ಯಬೇಕು**

। ದಾದದದ । ಪಗಗದಪ । ಪಾ,,, । ಪ ದಪ ದಸ ।
**ವೇದವನು ಓ ದಬೇ ಕು ಮನದೊಳಿಹ**

। ಸಾ ರಿಸಾ । ದಪಪ ದಸ । ಸಾ,,, । ಪಾದಸಸ ।
**ಭೇದವ ಕಳೆಯಬೇ ಕು ನ ನ್ನ ವ್ವ**

। ಸಾ ರಿಸ ಸ । ದಾ ಪಾ, । ದಪಪ ಗರಿ । ಗ ಸ ರೀ ರಿ ।
**ಸಾದರಣೆ ಯಿಂದ ತಿಳಿದು ನಿ ಶ್ಚಯವಾಗಿ**

। ಸಾ ರಿ ಗಪ । ಪ ಪಪಾಪ । ದಾಪ ಗಾ । ರಿ ಗ ರಿಸಸ ।
**ಕ್ರೋಧ ಕ ರ್ಮಗಳೆ ಲ್ಲ ಬಿಟ್ಟು ಹೋ ಗುವ ಹಾಗೆ**

। ರೀ ಗಾಗ । ರಿಸ ಸಾಸ । ರೀಗ ಗ ಗ । ರೀ ಸಸಾ ।
**ವೇಳಾಪು ರದ ಚೆನ್ನ ಕೇಶವನ ಸೇವೆಗೆ**

। ಸಾರೀಗ । ರಿ ಸ ರೀ ಗ । ರೀ,,, । ಸಾರೀರಿ ।
**ಆಲ ಸ್ಯ ವನು ಮಾಡ ದೆ ನ ನ್ನವ್ವ**

। ಸಾ ರಿ ಗ ಪ । ಪಾ ಪಾ ಪ । ದಾಸದಪ । ದಪಪ ಪಾ ।
**ಕೋಲ ಹಿಡಿ ದು ದ್ವಾರ ಪಾಲಕ ನಾ ಗುವೆ**

। ದಾಸ ದಪ । ಪಪ ದಾದ । ಪಾದ ಪಗ । ರಿಗ ರಿಸಾ ।
**ನೀಲ ಕುಂ ತಳೆ ಕ ಲ್ಲ ಬಿ ಟ್ಟು ಈ ಕಡೆಗೆ**

## ನಾನೇನು ಬಲ್ಲೆ ನಿನ್ನ ನಾಮದ ಸ್ಮರಣೆಯ

ನಾನೇನು ಬಲ್ಲೆ ನಿನ್ನ ನಾಮದ ಸ್ಮರಣೆಯ
ಏನೆಂದು ಸ್ತುತಿ ಮಾಡಲರಿಯೆ

ಹರಿ ಮುಕುಂದನು ನೀನು ನರಜನ್ಮ ಹುಳು ನಾನು
ಪರಮ ಪುರುಷನು ನೀನು ಪಾಪಿ ನಾನು
ಗರುಡಗಮನ ನೀನು ದುರುಳ ಕರ್ಮಿಯು ನಾನು
ಪರಂಜ್ಯೋತಿಯು ನೀನು ಪಾಮರನು ನಾನು

ಅಣುರೇಣು ತೃಣಕಾಷ್ಠ ಪರಿಪೂರ್ಣನು ನೀನು
ಕ್ಷಣಕ್ಷಣಕೆ ಅವಗುಣದ ಕರ್ಮಿ ನಾನು
ವನಜಸಂಭವನಯ್ಯ ವೈಕುಂಠಪತಿ ನೀನು
ತನುವು ಸ್ಥಿರವಲ್ಲದ ನರಬೊಂಬೆ ನಾನು

ಕಂಬದಲಿ ಬಂದಂಥ ಆನಂದ ಪತಿ ನೀನು
ನಂಬಿಗಿಲ್ಲದ ನಿರ್ಜೀವಿ ನಾನು
ಅಂಬರೀಷಗೆ ಒಲಿದ ದುರಿತದೂರನು ನೀನು
ಡಂಬಕದ ಮಾಯಾ ಶರೀರಿ ನಾನು

ವಾರಿಧಿಶಯನ ಭೂರಿ ಕಾರುಣ್ಯಪತಿ ನೀನು
ಘೋರತರ ಕಾಮು ಕ್ರೋಧಿಯು ನಾನು
ಈರೇಳು ಲೋಕವ ಪೊಡೆಗೆಯಲಿಟ್ಟವ ನೀನು
ಸಾರಿ ಭಜಿಸದ ದುಷ್ಟ ಕರ್ಮಿಯು ನಾನು

ತಿರುಪತಿಯೊಳು ನೆಲೆಸಿದ ವೆಂಕಟೇಶನು ನೀನು
ಚರಣಕೆರಗುವ ಕನಕದಾಸನು ನಾನು
ಬಿರುದುಳ್ಳ ದೊರೆ ನೀನು ಮರೆಹೊಕ್ಕೆನಯ್ಯ ನಾನು
ಮರಣಕಾಲಕೆ ಬಂದು ಕಾಯೊ ಹರಿಯೆ

ರಾಗ: ಗೌರೀಮನೋಹರಿ | ಸ ರಿ೨ ಗ೨ ಮ೧ ಪ ದ೨ ನಿ೩ ಸ | ಆದಿತಾಳ

। ,,,ಪಾಮಾಪ । ಗಮಾಗಾ, ಗಾ । ಗಾ ರೀ,ಸ ನೀ । ,,ಸ ರೀರಿ ರೀ ॥ ,,,ದಾನೀ ನಿ । ಸ ಸಾ ರೀ, ಗಾ । ಸಾರಿಸಸಾ,, । ಸಗರಿಮಗಾ,, ॥

**ನಾನೇ ನು ಬ ಲ್ಲೆ ನಿ ನ್ನ ನಾಮದ ಸ್ಮರಣೆಯ ಏ ನೆಂದು ಸ್ತುತಿ ಮಾಡ ಲರಿ ಯೆ ಹ ರಿ ಯೇ**

।,,ಗರೀ ಸ ನೀ । ಸಸಾ ಸಾ,ಸಾ । ,,ರಿಗಾ ರೀಗ । ಸ ನೀ ರೀ,ರೀ ॥ ,,ಮಮಾಮ ಮಾ । ಗ ರೀಸ ಗಾ,ಗ ।,,,ಪಾ,ಗಾ । ಪಾ,,ಪಾ,, ।

**ಹರಿ ಮುಕುಂ ದನು ನೀನು ನರ ಜನ್ಮ ಹುಳು ನಾನು ಪ ರ ಮ ಪು ರುಷನು ನೀನು ಪಾ ಪಿ ನಾ ನು**

। ;ಗಮಾಪಪಾ । ದ ದಾ ದಾ,ದಾ । ;ಗಮಾಪ ನೀ । ಸ ಸಾ ಸಾ,ಸಾ ॥ ;ಗರೀ ಗಾ, । ಸರೀ ನೀ,ಸಾ । ;ಸಾನಿ ದಪಾ । ಗಪಮಪಗಮಗಾ ।

**ಗರು ಡಗ ಮನ ನೀ ನು ದುರುಳ ಕ ರ್ಮಿಯು ನಾನು ಪರಂಜ್ಯೋ ತಿಯು ನೀನು ಪಾಮರನು ನಾ ನು**

। ಪಪಾಮಗಾಮಾ । ಮಪಾ ಪಾ,ಪಾ । ,,ಮಪನಿಪಾ । ಮ ಪಾ ಗಾ,ಗಾ ॥ ರಿಗಾರಿಗಾಗಾ । ರಿಗಾರಿಸಾಸಾ । ನೀ,ಸರೀ ಮಾ । ಗಾ,, ,,,, ।

**ಅಣುರೇ ಣು ತೃಣ ಕಾ ಷ್ಠ ಪ ರಿ ಪೂ ರ್ಣನು ನೀನು ಕ್ಷಣ ಕ್ಷಣ ಕೆ ಅವಗುಣದ ಕ ರ್ಮಿ ನಾ ನು**

। ,,ರಿಗಾರಿಗಾ । ಸಾರೀಸನಿಸಾ । ನೀ,ಸಾ,ನೀ । ಸರೀ ರೀ,ರೀ ॥ ಗಮಾಮ ಮಾಗಾ । ಮಾಪಾಪಾಪಾ । ಗರೀ ಸನೀ ಸಾ । ಗಾ,,ಗಾ,, ।

**ವನಜಸಂ ಭವ ನ ಯ್ಯ ವೈಕುಂಠ ಪತಿ ನೀನು ತನು ವು ಸ್ಥಿ ರ ವ ಲ್ಲದ ನರ ಬೊಂಬೆ ನಾ ನು**

। ಪಾ,ಪಮಗಮಗ । ಮಪಾಪಾ,ಪಾ । ಮಪಾನೀ,ಪಾ । ಮಪಾ ಗಮಾಗಾ ॥ ,,,ಗಾ,ರೀ । ರಿಗರಿಗರಿಸಸಾ । ಸಾ,ರೀ, ಸಾ । ರೀಮಾಗಾ,, ।

**ಕಂ ಬದ ಲಿ ಬಂ ದಂಥ ಆ ನಂದ ಪ ತಿ ನೀ ನು ನಂಬಿ ಗಿ ಲ್ಲದ ನಿ ರ್ಜೀವಿ ನಾ ನು**

। ,,ಮ ಮಾಮಾ, । ಮಪಾ ಗಮಾಗಾ । ,,ಮಪಾಮ ಗಾ । ಮಪಾ ಪಾ,ಪಾ । ,,ನೀ ನಿನಿಸಾ । ದಾ,,ಪಾ,, । ಗಾರೀ,,ನೀ । ಗಾ,,ಗಾ,, ।

**ಅಂಬ ರೀ ಷಗೆ ಒಲಿ ದ ದುರಿ ತ ದೂ ರನು ನೀ ನು ಡಂಬಕದ ಮಾಯಾ ಶ ರೀ ರಿ ನಾ ನು**

। ,,,ಪಾ,ಮಗಾ । ಮಪಾಪಾ, ಪಾ । ಪಾ ಮಪಾನಿ ಪಾ । ಮಪಾ ಗಾ,ಗಾ ॥ ,,,ಗಾ, ಗಾ । ರಿಗಾ ಸಾ,ಸಾ । ,,ಪಾ, ಮಗಾ । ಪಾ,,ಪಾ,, ।

**ವಾ ರಿ ಧಿ ಶ ಯನ ಭೂ ರಿ ಕಾ ರುಣ್ಯ ಪ ತಿ ನೀನು ಘೋರ ತರ ಕಾಮ ಕ್ರೋಧಿಯು ನಾ ನು**

। ರಿಗಾರೀ,ಗಾ । ಸಾರೀಸನಿಸಾ । ,,ನಿ ಸಾನಿದಾ । ನೀಸ ರಿ ರೀ,ರೀ ॥ ,,ಮಾಮ ಮಗಾ । ಮಪಾ ಪಾ,ಪಾ । ಗಾರೀನೀ ಸಾ । ಗಾ,,ಗಾ,, ।

**ಈ ರೇಳು ಲೋಕ ವ ಪೊಡೆಗೆಯ ಲಿಟ್ಟವ ನೀನು ಸಾ ರಿ ಭಜಿ ಸ ದ ದು ಷ್ಟ ಕ ರ್ಮಿಯು ನಾ ನು**

। ಗರೀ ಸನೀಸಾ । ಗಾ ಗಗಾಗಗಾ । ,,ರೀ ರಿಸನೀ । ರಿರೀ ರೀ,ರೀ । ,,ಮಾಮಾಮಾ । ಗಾರೀಗಾಮಾ । ,,ಪಪಾಮಗಾ । ಪಪಾ ಪಾ,ಪಾ ।

**ತಿರುಪತಿಯೊ ಳು ನೆಲೆಸಿದ ವೆಂಕಟೇ ಶನು ನೀನು ಚ ರ ಣ ಕೆ ರಗುವ ಕ ನ ಕ ದಾ ಸನು ನಾ ನು**

। ಗಮಾಪನೀನೀ । ಸ ಸಾ ಸಾ,ಸಾ । ;ರಿ ಗಾರಿ ಗಾ । ಸಾರೀ ಸನಿಸಾ । ;ನಿ ಸಾನಿದಾ । ಪಮಗಾ ಮಾಗಾ । ;ಗರೀಸನೀ । ಸರಿರೀರೀ,, ।

**ಬಿರು ದು ಳ್ಳ ದೊರೆ ನೀ ನು ಮರೆ ಹೊಕ್ಕೆ ನ ಯ್ಯ ನಾ ನು ಮರ ಣಕಾ ಲ ಕೆ ಬಂದು ಕಾ ಯೊ ಹ ರಿಯೆ**

# ನಿನ್ನ ನೋಡಿ ಧನ್ಯನಾದೆನೊ ಹರಿ ಶ್ರೀನಿವಾಸ

ನಿನ್ನ ನೋಡಿ ಧನ್ಯನಾದೆನೊ ಹರಿ ಶ್ರೀನಿವಾಸ

ನಿನ್ನ ನೋಡಿ ಧನ್ಯನಾದೆ
ಎನ್ನ ಮನಸು ನಯನ ಸುಪ್ರ
ಸನ್ನವಾಯಿತು ದಯವ ಮಾಡಿ
ಮುನ್ನ ಸಲಹಬೇಕು ಸ್ವಾಮಿ

ಪಕ್ಷಿವಾಹನ ಲಕ್ಷ್ಮೀರಮಣ
ರಾಕ್ಷಸಾಂತಕ ಯದುಕುಲಾನ್ವಯ
ಕುಕ್ಷಿಯೊಳು ಬ್ರಹ್ಮಾಂಡ ತಂಡವ
ರಕ್ಷಿಸುತಲಿಹ ಸುಜನ ಪಕ್ಷಾ

ದೇಶದೇಶ ತಿರುಗಿ ನಾನು
ಆಶೆಭರಿತನಾದೆ ಸ್ವಾಮಿ
ವಾಸಿ ನಿಮಗೆ ಸಲಹುವುದು ಜಗ
ದೀಶಕಾಯೊ ವಾಸುದೇವ

ಕಂತು ಜನಕ ಎನ್ನ ಮೊರೆಯ
ನಾಂತು ವಿಹಿತದಿಂದ ಸೇವೆ
ಅಂತರವಿಲ್ಲದೆ ದಯಪಾಲಿಸೊ
ಶಾಂತಮೂರ್ತಿಯಾದ ಕೇಶವ ಮುದ್ದು ವಿಠಲ

**ರಾಗ: ಮಿಶ್ರ ಪಹಾಡಿ** ಸ ರಿ ಮ ಪ ದ ನಿ ಸಾ ಸ ನಿ ದ ಪ ಮ ಗ ರಿ ಸ + **ಮ ದ ನಿ** **ತ್ರಿಶ್ರ ತ್ರಿಪುಟ ತಾಳ**

। ,ದಸಸ ರಿಮಮಾ । ಪಪದಪ**ಮ**ಪಮ । ಮಾ,,, ಮಗ । ರಿಗದಪಮಗಸರಿಮಗಗರಿರಿಸ । ನಿದ
**ನಿ ನ್ನ ನೋಡಿ ಧ ನ್ಯನಾ ದೆ ನೊ ಹರಿ ಶ್ರೀ ನಿ ವಾಸ**

। ದಾದ ದಾನಿದ । ಸಾನಿಸಾ ಸಾ । ನೀನಿ ರಿ ರಿರೀ । ಸ**ನಿ** ಸ ಸನಿನಿದ ।
**ನಿ ನ್ನ ನೋಡಿ ಧನ್ಯನಾದೆ ಎನ್ನ ಮನಸು ನಯನ ಸು ಪ್ರ**

। ನೀನಿ ರೀ ಸ **ನಿ** । ಸ **ನಿ** ಸ ನಿದದಾ । ಪಾ**ಮ** ಪಪದಾ । ಮಾಗ ಸರಿಮಗರಿಸನಿದ ।
**ಸ ನ್ನವಾಯಿತು ದಯವ ಮಾಡಿ ಮುನ್ನ ಸಲಹ ಬೇಕು ಸ್ವಾ ಮಿ**

। ಮಾಗಮಾಮಮ । ದಾ,**ದಾ,** ದನಿದಾ । ನೀನಿನೀ ನಿನಿ । ಸ ನಿ ಸ ನೀದ ದ ।
**ಪ ಕ್ಷಿವಾ ಹ ನ ಲ ಕ್ಷ್ಮೀರಮಣ ರಾಕ್ಷಸಾಂತಕ ಯದುಕುಲಾನ್ವಯ**

। ಪಾ**ಮ**ಪ ಪ ಪಾ । ದಾ **ದ** ದನಿದದ । ಸಾನಿದಪಮಗ । ದಪಮ ಗರಿಸದ ।
**ಕು ಕ್ಷಿ ಯೊಳು ಬ್ರ ಹ್ಮಾಂಡ ತಂಡವ ರಕ್ಷಿಸುತಲಿಹ ಸುಜನ ಪ ಕ್ಷಾ**

। ದಾ**ದ** ದಾನಿದ । ಸಸ **ನಿ** ಸಾಸಾ । ನೀನಿ ರಿರಿರೀ । ಸ**ನಿ**ಸ ನಿ**ದ**ದಾ ।
**ದೇಶ ದೇಶ ತಿರುಗಿ ನಾನು ಆಶೆ ಭರಿತ ನಾದೆ ಸ್ವಾಮಿ**

। ನೀ ನಿ ರಿಸ ನೀ । ಸನಿಸ ನಿ ದ ಪ**ಮ** । ಪಾ**ಮ** ಪಾದಾ । ಮಾಗ ಸರಿಮಗರಿಸನಿದ ।
**ವಾಸಿ ನಿಮಗೆ ಸಲಹುವುದು ಜಗ ದೀಶ ಕಾಯೊ ವಾ ಸುದೇ ವ**

। ದಾ**ದ** ದದನಿದ । ಸಾ**ನಿ** ಸ ಸಸಾ । ನೀ ನಿ ರಿರಿರೀ । ಸ**ನಿ**ಸ ನಿದದಾ ।
**ಕಂತು ಜನಕ ಎ ನ್ನ ಮೊರೆಯ ನಾಂತು ವಿಹಿತ ದಿಂದ ಸೇ ವೆ**

। ನೀ,ನಿನೀರೀಸ ನಿ । ಸ**ನಿ** ಸನಿದಪಾ । ಪಾ **ವ** ಪಾದದ । ಪ**ಮ**ಪ ಮಗರಿಸ ।
**ಅಂತರ ವಿಲ್ಲದೆ ದಯಪಾಲಿಸೊ ಶಾಂತ ಮೂರ್ತಿ ಯಾ ದ ಕೇ ಶವ**

। ದಸ ಸ ರಿಮಮಾ । ಗರಿಸರಿಗರೀ । ದಸ ಸ ರಿಮಮಾ । ಪ**ಮ**ಪಮಾ,, ।
**ಮುದ್ದು ವಿಠ ಲ ಕೇ ಶ ವ ಮುದ್ದು ವಿಠ ಲ ಕೇ ಶವ**

## ನೆಚ್ಚದಿರು ಸಂಸಾರ ಈ ಕಾಯ ಸ್ಥಿರವಲ್ಲ

ನೆಚ್ಚದಿರು ಸಂಸಾರ ಈ ಕಾಯ ಸ್ಥಿರವಲ್ಲ
ಅಚ್ಯುತನ ನಾಮವನು ನೆನೆದು ಸುಖಿಯಾಗೊ

ಗಳಿಸದಿರು ಸೀಮೆಯನು ಗಳಿಸದಿರು ದ್ರವ್ಯವನು
ಗಳಿಸದಿರು ನೀ ದುರಿತ ರಾಶಿಗಳನು
ನಳಿನನಾಭನ ದಿವ್ಯ ನಾಮವನು ನೆನೆನೆನೆದು
ನೆಲೆಯಾದ ಪರಮ ಪದವಿಯ ಪಡೆಯೊ ಮನವೆ

ನೋಡದಿರು ಪರಸತಿಯ ಕೂಡದಿರು ದುರ್ಜನರ
ಆಡದಿರು ಮಾತುಗಳ ಗರ್ವದಿಂದ
ಬೇಡದಿರು ಕೈಯ ಹಿಂದೆಗೆವ ಲೋಭಿಯ–ಕೊಂ
ಡಾಡದಿರು ಬೀದಿಗೂಳುಂಬ ದೈವಗಳ

ನಾನಾ ಜನ್ಮದಿ ಬಂದ ನಾಟಕದ ಬೊಂಬೆಯಿದು
ಮಾನಕ್ಕೆ ಮೆಚ್ಚಿ ನೀ ಮರುಳಾಗದೆ
ಜಾಣತನದಿಂ ಕಾಗಿನೆಲೆಯಾದಿಕೇಶವನ
ಮಾನಸದಲಿ ನೆನೆದು ಸುಖಿಯಾಗೊ ಮನುಜ

ರಾಗ: ಆನಂದನಟನಿ    ಸ ರಿ$^{೧}$ ಗ$^{೧}$ ಮ$^{೧}$ ಪ ನಿ$^{೨}$ ಸ    ಆದಿತಾಳ

। ,,ಸಾರಿ ಗ ರೀ । ಗಾ,ರೀ,ಸಾ । ಸನೀ ಸಾ,ರೀ । ಗ ಗರೀ,ಸಾ ॥
ನೆಚ್ಚದಿರು ಸಂಸಾ ರ ಈ ಕಾ ಯ ಸ್ಥಿರವ ಲ್ಲ
। ಸಾ,ರಿ ಮಾಮಾ । ಪಾ,ನಿ ಪಾನೀ । ,,,ನಿಪಾಮಾ । ಗ ಗಾ,ಮಾ,ಮಾ ।
ಅಚ್ಯುತ ನ ನಾಮವ ನು ನೆನೆ ದು ಸುಖಿ ಯಾಗೊ

। ಮಮಾಪಪಾಪಾ । ಪಾ,ನಿ ಪಾಮಾ । ಗಗಾಮಪಾಮಾ । ಗಾ,ರಿ ಸಾಸಾ ।
ಗ ಳಿ ಸ ದಿ ರು ಸೀ ಮೆಯನು ಗಳಿ ಸ ದಿ ರು ದ್ರವ್ಯವನು
। ಗಗಾಮಪಾನೀ । ನೀ, ನಿನೀನೀ । ,,,ಪಾ,ನೀ । ಸಾರೀಸಾ,, ।
ಗಳಿಸ ದಿರು ನೀ ದುರಿತ ರಾ ಶಿ ಗ ಳ ನು
। ,,ಗಗಾಗಗಾ । ರಿ ರೀ ಸಾ,ಸಾ । ,,ಪಾನಿ ಸನೀ । ಪನೀಸನೀಪಾ ।
ನಳಿ ನನಾ ಭನ ದಿ ವ್ಯ ನಾಮವನು ನೆನೆ ನೆನೆ ದು
। ಮಪಾನೀ,ಪಾ । ಮಪಾಮ ಮಾಮಾ । ಗಮಾ ಪಪಾ,ಮಾ । ಗಾರೀಸಾ,, ।
ನೆ ಲೆಯಾದ ಪ ರ ಮ ಪ ದ ವಿಯ ಪಡೆ ಯೊ ಮನವೆ

। ಗಾ, ಗ ರೀರೀ । ಸಸಾರಿಸಾಸಾ । ಗಾ,ಗಗಾಗಾ । ಗಾ,ಮಮಾಮಾ ।
ನೋಡದಿ ರು ಪರಸತಿ ಯ ಕೂಡದಿರು ದು ರ್ಜನ ರ
। ಪಾ,ಪನೀನೀ । ಸಾ, ಸ ಸಾಸಾ । ,,,ನೀ,ನೀ । ಸಾರೀಸಾ,, ।
ಆ ಡದಿರು ಮಾತುಗ ಳ ಗ ರ್ವ ದಿಂ ದ
। ಗಾ,ಗರೀರೀ । ಸಾ,ಸಾ, ಸಾ । ನಿಸಾನಿಪಾ ನೀ । ಪನಿಸನಿಪಾ ಪಾ ।
ಬೇಡದಿರು ಕೈಯ ಹಿಂ ದೆಗೆ ವ ಲೋ ಭಿ ಯ ಕೊಂ
। ಮಾ,ಪನೀಪಾ । ಮಪಾಮಾ,ಮಾ । ಗಮಾಪಾ, ಮಾ । ಗಾಗಾರೀಸಾ ।
ಡಾ ಡದಿರು ಬೀ ದಿ ಗೂ ಳುಂ ಬ ದೈ ವ ಗ ಳ

। ಮಾ,ಮಾ, ಪಾ । ನಿ ಪಾ ಪಾ,ಪಾ । ಪಾ,ನಿಸಾರೀ । ಸನೀ ನಿ ಸಾ ಸಾ ।
ನಾ ನಾ ಜ ನ್ಮದಿ ಬಂದ ನಾ ಟಕ ದ ಬೊಂಬೆಯಿದು
। ,,ಗಾ, ಗರೀ । ಸಾ,ಸಾ, ನೀ । ಪ ನೀಪಾ,ಮಾ । ಗಾ,,ರೀಸಾ ।
ಮಾನಕ್ಕೆ ಮೆಚ್ಚಿ ನೀ ಮರುಳಾ ಗ ದೆ

।,,ಗಾ ಗ ಗಗಾ । ಗಾ, ಗಾ,ಗಾ । ಮಮಾಗಾ, ರೀ । ಗಾ,ಮಮಾಮಾ ।
ಜಾಣತನ ದಿಂ ಕಾ ಗಿ ನೆ ಲೆ ಯಾದಿ ಕೇ ಶ ವ ನ
।,,ಪಾ ನಿಸಾ । ನಿನೀ ಪಪಾಮಾ । ಗ ಮಾಪಾ, ಮಾ । ಗಾರೀಸಾ,, ।
ಮಾನಸ ದಲಿ ನೆನೆ ದು ಸುಖಿ ಯಾಗೊ ಮನುಜ

# ನೆರೆದು ಗೋಪಿಯರೆಲ್ಲರು ಕೃಷ್ಣಯ್ಯನ

ನೆರೆದು ಗೋಪಿಯರೆಲ್ಲರು– ಕೃಷ್ಣಯ್ಯನ
ಕರವ ಪಿಡಿದುಕೊಂಡು
ಭರದಿಂದ ಬಂದು ಯಶೋದೆಗೆ ಚಾಡಿಯ
ಅರುಹಿದತಿ ವೇಗದಿ

ಬಲು ಕಳ್ಳ ನಿನ್ನಮಗ–ಯಶೋದೆ ಕೇಳೆ
ಹಾಲು ಕರೆಯುತಿರಲು
ತೊಲೆಗೆ ನಿಚ್ಚಣಿಕೆಯನೆ ಹಾಕದೆ ಸುರಿವನು
ನೆಲುವಿನ ಹಾಲ್ಮೊಸರ

ಅಮ್ಮಯ್ಯ ಇಲ್ಲಕಾಣೆ–ಇವಳು ಎನ್ನ
ಸುಮ್ಮನೆ ದೂರುವಳೆ
ಹಮ್ಮಿಂದ ನಾನವಳ ಅಟ್ಟಕ್ಕೆ ನೆಗೆಯಲು
ಬೊಮ್ಮ ಜಟ್ಟಿಗನೇನಮ್ಮ

ಮತ್ತೆ ಮುತ್ತಿನಂಥ ನಿನ್ನೀ ಮಗ
ಹತ್ತಿ ಗವಾಕ್ಷದಿಂದ
ಎತ್ತಿಟ್ಟ ಬೆಣ್ಣೆಯನೆಲ್ಲವ ಮೆದ್ದನು
ಹೆತ್ತ ಮಕ್ಕಳಿಗಿಲ್ಲದಂತೆ

ಗಡಿಗೆ ಬೆಣ್ಣೆ ಮೆಲ್ಲಲು–ಎನ್ನಹೊಟ್ಟೆ
ಮಡುವು ಭಾವಿಯೇನೆ
ಹುಡುಗರರಿಯದೆ ಎತ್ತಿಟ್ಟ ಬೆಣ್ಣೆಯ
ಹೊಡೆದರವರ ಮಕ್ಕಳು

ಮಕ್ಕಳು ಪಡೆದವರು–ಇಲ್ಲದ ಕಳ
ವಿಕ್ಕಬಹುದೆ ಕೃಷ್ಣಗೆ
ಸಿಕ್ಕ ತಪ್ಪು ಸಮೇತ ಎಳೆತಂದರೆ
ತಕ್ಕ ಬುದ್ಧಿಯ ಹೇಳುವೆ

ಅಣುಘನರೂಪ ಕಾಣೆ ನಿನ್ನೀ ಮಗ
ಚಿನುಮಯರೂಪ ರೂಪ ಕಾಣೆ
ಘನ ಮಹಿಮನು–ಇಂಗಳಗೊಂದಿಯ
ಚೆನ್ನಕೇಶವರಾಯ ಕಾಣೆ

ರಾಗ: ಮಾಂಡ್ ಸ ಗ ಮ ಪ ದ ನಿ ಸ ಸ ನಿ ದ ಪ ಮ ಪ ಗ ರಿ ಸ ತ್ರಿಶ್ರ ತಿಪುಟ ತಾಳ

। ಗಪಾದನಿ ಸಾ । ನಿನೀ ದಾಪಾ । ದಾ,,,ಸಾ । ದಸದಪಮಮಾ । ಸದಾಮಾ ಪಾ । ಗರಿಸ ಗಾರೀ । ಗಾ,,,ಸಾ । ದಾಪಮಪಗಾ ।
**ನೆರೆ ದು ಗೋ ಪಿಯರೆ ಲ್ಲ ರು ಕೃ ಷ್ಣ ಯ್ಯ ನ ಕರ ವ ಪಿ ಡಿ ದುಕೊಂ ಡು**
। ಗಪಾದನಿಸನಿ । ದನೀಪಾ ಗಪ । ದಸಾಸಾಸಾ । ನೀ,ದಾಪ । ಸದಾಪಾಮಾ । ಮಮಾ ಪಮಪಮ । ಗಾ,,,ಗಮ । ಪದನಿಸನಿಸಾ ।
**ಭರ ದಿಂ ದ ಬಂ ದು ಯ ಶೋದೆಗೆ ಚಾಡಿ ಯ ಅರುಹಿ ದ ರ ತಿ ವೇ ಗ ದಿ ಗೋ ಪಿ ಯ ರು**

। ದಪಾ ಗಾಸಾ । ಗಾರಿ ಗಾಗಾ । ಗ ಪಾ ದನಿಸಾ । ದನಿಸದಾ, । ಸಾ,ದಾ ಗಾ । ಮದಪಗ ರಿಸಾ । ಗಾ,,,,, । ಗರಿಗ ಸರಿಸಾ ।
**ಬಲು ಕ ಳ್ಳ ನಿ ನ್ನ ಮಗ ಯಶೋದೆ ಕೇ ಳೆ ಹಾಲು ಕ ರೆ ಯುತಿರ ಲು ನಿ ನ್ನ ಮಗ**
। ಗ ಪಾದನಿ ಸಾ । ಸ ನಿಸದಾದಾ । ಗಮದಪಾಗಾ । ಗ ರಿಸಗಾಗಾ । ಗಪಾದನಿಸಾ । ಸಾ ನೀ ಸಾ । ದಾ,,,, ಗಾ । ದಪಗರಿಸಗಾ ।
**ತೊಲೆಗೆ ನಿ ಚ್ಚಣಿಕೆಯನೆ ಹಾ ಕ ದೆ ಸುರಿ ವನು ನೆಲುವಿ ನ ಹಾಲ್ಮೊ ಸ ರ ಯ ಶೋದೆ**

। ಗಮದಪಾ ಮಾ । ಗರಿಸ ಗಾಗಾ । ಗಪಾದನಿಸ । ಸನಿಸದಾ,, । ಸಾದಾಮಾ । ಪಮಪಗಾರಿಸ । ಗಾ,,, ಗಮ । ದನಿಸದಾ,, ।
**ಅ ಮ್ಮಯ್ಯ ಇಲ್ಲ ಕಾಣೆ ಇವಳು ಎ ನ್ನ ಸುಮ್ಮನೆ ದೂ ರುವ ಳೆ ಅ ಮ್ಮ**
। ಸಾ,ದಾ ಮಾ । ಪಮಪಮಗಗಾ । ಗಾ,ರೀಸಾ । ಮಗಮಾಮಾ । ಗಮಾದಾ ದಾ । ದಪಾದನಿಸನಿ । ದಾ,,,ಗಪ । ದನಿಸದಾ,, ।
**ಹ ಮ್ಮಿಂದ ನಾ ನವಳ ಅ ಟ್ಟಕ್ಕೆ ನೆ ಗೆಯ ಲು ಬೊ ಮ್ಮ ಜ ಟ್ಟಿಗ ನೇ ನ ಮ್ಮ ಅ ಮ್ಮ**

। ಸಾ,ದಾ ದಾ । ಸಾ,ಸಾಸಾ । ಸಾ,ಸನಿ ಸ । ದಾ,,,,, । ಸಾ,ದಾಮಾ । ಪಾಮಗರಿಸಾ । ಗಾ,,, ಗಮ । ದನಿಸಸಾ,, ।
**ಮು ತ್ತೆ ಮು ತ್ತಿ ನಂಥ ನಿ ನ್ನೀ ಮ ಗ ಹ ತ್ತಿ ಗ ವಾಕ್ಷ ದಿಂ ದ ಯ ಶೋದೆ**
। ಗಾ,ರೀಗಾ । ರಿಸರಿಸಾಸಾ । ಸಾ,ನೀದಾ । ಪದಪಮಾಮಾ । ಗಮಾದಾ ನೀ । ಸಸಾದಾನೀ । ಸಾ,ಸಾ ಸಾ । ನಿಸಾದಾ,, ।
**ಎ ತ್ತಿಟ್ಟ ಬೆ ಣ್ಣೆಯ ನೆ ಲ್ಲವ ಮೆ ದ್ದ ನು ಹೆ ತ್ತ ಮ ಕ್ಕಳಿ ಗಿ ಲ್ಲ ದಂತೆ ಯ ಶೋದೆ**

। ಗಮದ ಪಾಮಾ । ಗರಿಗರಿಸಸಾ । ಗಮಾಪಾಪಾ । ದನಿಸದಾ,, । ಸ ನಿ ಸ ದಾಮಾ । ಪಮಪಗಾ ಮಾ । ದನಿಸದಾ,, । ,,,,,,, ।
**ಗಡಿಗೆ ಬೆ ಣ್ಣೆ ಮೆ ಲ್ಲಲು ಎ ನ್ನ ಹೊ ಟ್ಟೆ ಮಡುವು ಭಾವಿ ಯೋ ನೆ ಅ ಮ್ಮ ಯ್ಯ**
। ಗ ಮಾಪಾಪಾ । ದನೀದಾ,, । ಸಾ,ನೀದಾ । ಸಾ,ಸಾಸಾ । ಸ ನೀದಾಮಾ । ಪಮಾ ಗಾರಿಸ । ಗಾ,,, ಗಮ । ದನಿಸದಾ,, ।
**ಹುಡು ಗ ರ ರಿಯದೆ ಎ ತ್ತಿಟ್ಟ ಬೆ ಣ್ಣೆಯ ಹೊಡೆ ದ ರ ವರ ಮಕ್ಕ ಳು ಅ ಮ್ಮಯ್ಯ**

। ಗಾ,ರೀಸಾ । ಗಗಾಗಾಗಾ । ಮಾ,ಮಾಮಾ । ಮಪಾಮಾಗಾ । ಗಮಾದಾ,, । ನೀ,,,ನೀ । ಸಾ,,,,, । ,,,,,,, ।
**ಮಕ್ಕಳು ಪಡೆದವ ರಿ ಲ್ಲ ದ ಕ ಳ ವಿ ಕ್ಕ ಬಹುದೆ ಕೃ ಷ್ಣ ಗೆ**
। ಸಾಸ ಸಾಸಾ । ನಿಸಾದಾ,, । ಸದಾಮಾಮ । ಪಮಪ ಮಗಗಾ । ನೀ,ದಾಪಾ । ಪಮಪಮಗರಿಸ । ಗರೀಗಾ,, । ,,,,,,, ।
**ಸಿ ಕ್ಕ ತಪ್ಪು ಸಮೇತ ಎಳೆ ತಂದ ರೆ ತ ಕ್ಕ ಬು ದ್ಧಿಯ ಹೇ ಳು ವೆ**

। ಗ ಗಾ ರೀಸಾ । ಸನಿ ದ ಸಾಸಾ । ಮಾ,ಪಮಪಮ । ಗರಿಸಗಾ,, । ಗಮಾಪಾಪಾ । ದಾ ದ ನೀ,, । ಸಾ,,, ಸಾ । ನಿಸಾದಾ,, ।
**ಅಣುಘನ ರೂಪ ಕಾಣೆ ನಿ ನ್ನೀ ಮ ಗ ಚಿನುಮಯ ರೂಪ ಕಾ ಣೆ ಯ ಶೋದೆ**
। ಗಮಾ ಪಾದಾ । ನಿ ಸಾ,, ಸಾ । ನಿಸಾನಿದ ದಾ । ನಿನೀ ಸಾಸಾ । ನಿಸಾನಿದದಾ । ಸದಪಮಾ,, । ಪಮಪಗಾ ಸಾ । ಮಾ, ಗಾ,, ।
**ಘನ ಮಹಿ ಮನು ಇಂ ಗಳ ಗೊಂದಿ ಯ ಚೆ ನ್ನ ಕೇ ಶ ವ ರಾ ಯ ಕಾ ಣೆ ಯ ಶೋದೆ**

## ನೋಡು ನೋಡು ಗೋಪಿ ನಿನ್ನ ಮಗನ ಲೂಟಿಯ

ನೋಡು ನೋಡು ಗೋಪಿ ನಿನ್ನ ಮಗನ ಲೂಟಿಯ
ಮಾಡುತಾನೆ ಮನೆಗೆ ಬಂದು ಬಹಳ ಚೇಷ್ಟೆಯ

ಮಾನಿನೀಯರೊಳಗೆ ಪೋಕಾಟವೇನಿದು
ಮಾನವನ್ನು ಕಳೆದ ಪರಿಯ ಹೇಳತೀರದು

ಪಿಡಿದ ಸೆರಗ ಬಿಡನು ಇನ್ನೇನ ಹೇಳಲಿ
ತಡೆಯಲಾರೆವಮ್ಮ ಕೇಳೆ ಇವನ ಹಾವಳಿ

ಇನ್ನು ಚನ್ನಕೇಶವನ ಕದಳಿ ರಂಗನ
ಬನ್ನಣೇಯ ಮಾತ ಕೇಳಿ ಬಿಡುವೆ ಪುರುಷನ

**ರಾಗ: ಕರಪಾಣಿ** **ಸ ರಿ<sup></sup> ಗ ಪ ದ ನಿ ಸ (ಮಧ್ಯಮ ಶ್ರುತಿ)** **ಆದಿತಾಳ ತ್ರಿಶ್ರ ನಡೆ**

। ಗಾ ರಿ ಸನಿ ದ । ನಿಸ ಸಾ ಪಪ । ದ ಸಸ ರೀ ಗ । ರೀ, ,,, ।
**ನೋಡು ನೋಡು ಗೋಪಿ ನಿನ್ನ ಮಗನ ಲೂಟಿ ಯ**

। ಗಾ ಗ ಗಾಗ । ರಿ ಗರಿ ಪಗಗ । ರಿಗರಿ ಸಾ ನಿ । ಸಾ,ರೀ, ।
**ಮಾಡುತಾನೆ ಮನೆಗೆ ಬಂದು ಬಹಳ ಚೇಷ್ಟೆ ಯ**

। ಪಾಪಪಾಪ । ಪಪಪಾ ಪಾ । ಗಾಸರೀಗ । ಪಾ, ,,, ।
**ಮಾನಿನೀಯರೊಳಗೆ ಪೋಕಾಟವೇನಿದು**

। ಗಾ ಗಗಾಗ । ರಿಗರಿ ಪಗಗ । ರಿಗರಿಸಾ ನಿ । ಸಾ,ರೀ, ।
**ಮಾನವನ್ನು ಕಳೆದ ಪರಿಯ ಹೇಳತೀರ ದು**

। ಪನಿಪ ನಿಸನಿ । ಸರಿ ರೀ ರಿಸ । ಸರಿಸ ರಿಗಪ । ಗರೀ,,, ।
**ಪಿಡಿದ ಸೆರಗ ಬಿಡನು ಇ ನ್ನೇನ ಹೇಳ ಲಿ**

। ಗಗ ಗ ಗಾ ರಿ । ಪಗಗಾ ಗಾರಿ । ರಿಗ ರಿ ಸಾ ನಿ । ಸಾ, ,,, ।
**ತಡೆಯಲಾರೆ ವ ಮ್ಮ ಕೇಳೆ ಇವನ ಹಾವ ಳಿ**

। ಪಾಪ ಪಾಪ । ದಪಪಪಪಾ । ಗರಿಸ ರೀ ಗ । ಪಾ, ,,, ।
**ಇನ್ನು ಚ ನ್ನ ಕೇ ಶವನ ಕದಳಿ ರಂಗ ನ**

। ಗಾಗಗಾ ಗ । ರಿಗ ರಿ ಪಗಗ । ರಿ ಗ ರಿ ಸ ಸ ನಿ । ಸಾ,ರೀ, ।
**ಬನ್ನಣೇಯ ಮಾತ ಕೇ ಳಿ ಬಿಡುವೆ ಪುರುಷ ನ**

# ಬಯಲ ಬಾವಿ ನೀರಿಗ್ಹೋಂಟಾಳೊಬ್ಬ ಬಾಲಿ

ಬಯಲ ಬಾವಿ ನೀರಿಗ್ಹೋಂಟಾಳೊಬ್ಬ ಬಾಲಿ
ಹರಿಯೋ ಹೊಳಿ ನೀರಿಗ್ಹೋಂಟಾಳೊಬ್ಬ ಬಾಲಿ

ಕಾಲಿಟ್ಟು ಮೊಗಿಬ್ಯಾಡ ಕೈಯಿಟ್ಟು ಹೊರಬ್ಯಾಡ
ನೀರಿಲ್ಲದ ಮನಿಗಿ ಬರಬ್ಯಾಡ

ಸತ್ತದ್ದು ತರಬ್ಯಾಡ ಜೀವದ್ದು ಕೊಲಬ್ಯಾಡ
ಬಾಡಿಲ್ಲದ ಮನಿಗಿ ಬರಬ್ಯಾಡ

ಕಾಗಿನೆಲೆ ಕನಕದಾಸ ಹಾಕಿದ ಮುಂಡಿಗಿ
ಬಲ್ಲಂಥ ಒಡೆಯರು ಒಡೆದು ಹೇಳಿರನ್ನ

ರಾಗ: ಪಹಾಡಿ ಸ ರಿ ಮ ಪ ದ ನಿ ಸಾ ಸ ನಿ ದ ಪ ಮ ಗ ರಿ ಸ + **ಮ** ನಿ **ತಿಪುಟ ತಾಳ**

। ದಸ ಸ ರಿಮಮಾ । ಪದದಪ**ಮ** ಪಾ । ದಸ ದ ಪ**ಮ**ಪಮ । ಮಾ(ಗರಿಸರಿಸ) ।
**ಬಯಲ ಬಾ ವಿ ನೀ ರಿಗ್ಹೊಂಟಾ ಳೊಬ್ಬ ಬಾ ಲಿ**

। ದದದಾ ಪ ದಾ । ದಸದಪಮ ಪಾ । ದಾ ದ ಪ**ಮ**ಪಮ । ಮಾಗರಿಸರಿಸ ।
**ಹರಿಯೋ ಹೊಳಿ ನೀ ರಿಗ್ಹೊಂಟಾ ಳೊಬ್ಬ ಬಾ ಲಿ**

। ಸಾ,ನೀಸಾ । ನಿ ಸಾನಿದದಾ । ಸಾ ನೀ ಸಾ । ನಿ ಸಾನಿದದಾ ।
**ಕಾ ಲಿಟ್ಟು ಮೊಗಿ ಬ್ಯಾಡ ಕೈಯಿಟ್ಟು ಹೊರ ಬ್ಯಾಡ**

। ಪಾ,**ಮಾ**ಪಾ । ದಾ ಪ **ಮ**ಪಾ । ದದಾಪಮಪಮ । ಮಾಗರೀಸಾ ।
**ನೀ ರಿ ಲ್ಲ ದ ಮನಿ ಗಿ ಬರ ಬ್ಯಾ ಡ**

। ಮಾ,ಮಾಮಾ । ಗಮಗರಿಸ ಸಾ । ಮಾ,ಗಾಮಾ । ಗ ಮಗರಿಸ ಸಾ ।
**ಸ ತ್ತ ದ್ದು ತರ ಬ್ಯಾಡ ಜೀ ವ ದ್ದು ಕೊಲ ಬ್ಯಾಡ**

। ಸಾ,ರಿಮಮಾ । ಪದದ ಪ **ಮ**ಪಾ । ದದಾಪಮಪಮ । ಮಾಗರೀಸಾ ।
**ಬಾಡಿ ಲ್ಲ ದ ಮನಿ ಗಿ ಬರ ಬ್ಯಾ ಡ**

। ಸಾಸನೀಸಾ । ಸನಿಸ ನಿದದಾ । ಸಾ,ನೀಸಾ । ನಿಸಸನಿದದ ।
**ಕಾಗಿನೆ ಲೆ ಕನಕದಾ ಸ ಹಾಕಿ ದ ಮುಂಡಿ ಗಿ**

। ಪಾ,**ಮಾ**ಪಾ । ದದದಪ**ಮ**ಪಾ । ದದ ದ ಪಮಪಮ । ಮಾಗರಿಸರಿಸ ।
**ಬ ಲ್ಲಂಥ ಒಡೆ ಯ ರು ಒಡೆದು ಹೇ ಳಿ ರ ಣ್ಣ**

## ಬೆನಕನೊಲ್ಲೆನವ್ವ ತುಲಕಿ ಆಡುವವನ– ತೋರೆ ಬೇಗನೆ ಸಖಿ

ಬೆನಕನೊಲ್ಲೆನವ್ವ ತುಲಕಿ ಆಡುವವನ
ಷಣ್ಮುಖನೊಲ್ಲೆನವ್ವ ಬಹುಬಾಯಿಯವನ
ಇಂದ್ರನೊಲ್ಲೆನವ್ವ ಮೈಯೆಲ್ಲ ಕಣ್ಣಿನವನ
ಚಂದ್ರನನೊಲ್ಲೆನವ್ವ ಕಳೆಗುಂದುವವನ

ರವಿಯನೊಲ್ಲೆನವ್ವ ಉರಿದು ಮೂಡುವನ
ಹರನನೊಲ್ಲೆನವ್ವ ಮರುಳುಗೊಂಬುವನ
ಚೆನ್ನರಾಯ ಚೆಲುವ ಜಗಕೆಲ್ಲ ಒಡೆಯನ
ಕರೆದುತಾರೆ ಎನಗೆ ಕಾಗಿನೆಲೆಯಾದಿಕೇಶವನ

ತೋರೆ ಬೇಗನೆ ಸಖಿ
ತೋರ ಮುತ್ತಿನಹಾರ ಭಾರವಾಗಿದೆ ನನಗೆ
ಈರೇಳು ಲೋಕದ ಪೊರೆವದಯಾನಿದೆ
ಬಾರನೇತಕೆ ಮನೆಗೆ ಹೇ ಸಖಿ

ತರಣಿತನಯಸುತನ ಬಾಯೋಳನ್ನೃತವ
ಭರದಿಂದ ನುಡಿಸಿದನ
ತರಣಿ ಸುತನ ಬಾಣವೆರಗದಂದದಿ ರಥವ
ಧರೆಗೆ ಒತ್ತಿದ ದೇವನ

ತರಣಿಯ ಮರೆಮಾಡಿ ಶಿರವ ತರಿಯುವಂತೆ
ನರಗೆ ಸೂಚಿಸಿದಾತನ
ತರಣಿಯೊಡನೆ ಪಂಥವಾಡಿ ತಿರುಗಿದ
ತರಳನಾಳಿದನ ತೋರಿಸೆ ಹೇ ಸಖಿಯೆ

ವರಮುನಿಗಳು ಕೂಡಿ ಸರ್ವೋತ್ತಮನಾರೊ
ಪರಿಶೋಧಿಸಬೇಕೆಂದು
ಭರದಿಂದ ಭೃಗು ಮುನಿ ಬಂದು ಕೋಪಿಸೆ ಬೇಗ
ಚರಣವನೊತ್ತಿದವನ

ಪರಿಪರಿಯಲಿ ದೇವ ಪರಮ ಭಕ್ತರ
ಕಾವ ಸುರರಿಗಭಯವಿತ್ತವನ
ವರವೇಲಾಪುರದಾದಿ ಕೇಶವನ
ಮರೆಯಲಾರೆನೆ ಮನದಿ ಹೇ ಸಖಿಯೆ

**ರಾಗ: ಮಿಶ್ರ ಪೀಲೂ** ಸ ರಿ೨ ಗ೨ ಮ೧ ಪ ದ೨ ನಿ೨ ಸ + ಗ೩ ನಿ೨

। ಗ ಗಗಗಾ ಗ ಪಮಗಾ,,, ರಿ ಗರಿ ಸಾನಿ ರಿ ರಿ ರೀ,,, ॥ ನೀನಿ ನಿಸಾ ರಿ ರೀರೀ,,, ಗ ರಿ ಸಾ ನಿ ಸ ಸಸಾ,,, ।
**ಬೆನಕನೊಲ್ಲೆನ ವ್ವ ತುಲಕಿ ಆಡುವವನ ಷ ಣ್ಮುಖನೊಲ್ಲೆನವ್ವ ಬಹುಬಾಯಿಯವನ**
। **ಗಾ ಗ ಗಾ ಗ ಗಾ**ಮಗಮಾ,,, ರಿಮಮನಿಪ ಮಗಮಗ ರಿರೀ । **ನೀ ನಿ** ಸ ಸರಿ ರಿ ರೀರೀ,,, ಗರಿ ಸಾ ನಿ ಸ ರಿರೀ,, ।
**ಇಂದ್ರನೊಲ್ಲೆನ ವ್ವ ಮೈಯೆ ಲ್ಲ ಕ ಣ್ಣನವನ ಚಂದ್ರನನೊಲ್ಲೆನವ್ವ ಕಳೆಗುಂದುವವನ**
। ಪಪಪಮರಿಮಪಾಪಾ,,, ನಿ ದ ನಿ ಪದ ಪ ಪಪಾ,,,, ॥ ಗಾಗ ಗಾಗ ಪಮಗಾ,, ಮರಿಮನಿಪ **ಗ**ಮಗರೀ,,, ।
**ಹರನನೊ ಲ್ಲೆನ ವ್ವ ಮರುಳುಗೊಂಬುವವನ ಚೆ ನ್ನರಾಯ ಚೆಲುವ ಜ ಗಕೆ ಲ್ಲ ಒಡೆಯನ**
। ಸನಿದ ಪಮಪಗಾ ನಿಸರೀ,, ನೀಸರಿಪ ಗಾ ರಿ ಸನಿಸರಿರೀ,,। ಸರಿಗ ಪಾಪಾ ದಪದ ಗಾಮಪನಿ ಪಾ ದ ಮಗರಿಸ ನಿಸಾ ।
**ಕರೆದು ತಾ ರೆ ಎನಗೆ ಕಾಗಿನೆಲೆಯಾದಿ ಕೇ ಶವನ ಕರೆದು ತಾ ರೆ ಎನಗೆ ಕಾಗಿ ನೆಲೆಯಾದಿ ಕೇ ಶವನ**

**ರಾಗ: ಮಿಶ್ರ ಪೀಲೂ** ಸ ರಿ೨ ಗ೨ ಮ೧ ಪ ದ೨ ನಿ೨ ಸ + ಗ೩ ನಿ೨ ಮಧ್ಯಮ ಶ್ರುತಿ **ಏಕತಾಳ(ತ್ರಿಶ್ರ ನಡೆ)**

। ನಿಸ ನಿ ಸಗರಿಸಾ, ದನೀ । ಸಾ ನಿ ಸಗರಿಸಾ, ,,, । **ಗಾ ಗಾ ಗಾ ಗ**ಮ ಗಾಮಾ । **ಗಾ**ಮನಿಪಮಗಾ ರಿಗಸಾ ।
**ತೋರೆ ಬೇಗನೆ ಸಖಿ ತೋರೆ ಬೇಗನೆ ತೋರ ಮುತ್ತಿನ ಹಾರ ಭಾರವಾ ಗಿ ದೆ ನನಗೆ**
। ಪಾ,ಮಗಮ ಪಾ, ಪಪಾ । ಮ ಪಮನಿದ ನಿಪದಪಪಪಾ । ಗಾ ಮನಿದಪಮಾ ಮಗಮಾ । ರಿಗಸ ರಿಮಾಗರೀ,,, ।
**ಈ ರೇ ಳು ಲೋಕದ ಪೊರೆವ ದಯಾ ನಿದೆ ಬಾರ ನೇ ತಕೆ ಮನೆಗೆ ಹೇ ಸಖಿ ಯೆ**

। ಗರಿಗರಿಸ ರಿ ನಿ ಸಸಾ,, । ನಿ ಸನಿ ಸ ರಿಸರಿ ಮಗರೀ, । **ಗಗಗಾ ಗಾ ಗ** ಮಗಮಮಾ । ಗಾ ಮ ನಿಪಮಗರೀ,,, ।
**ತರಣಿತನಯಸುತನ ಬಾಯೊಳು ಅ ನೃತ ವ ಭರದಿಂದ ನುಡಿ ಸಿದ ನ ತೋರೆ ಬೇ ಗ ನೆ**
। ನಿಸ ನಿ ಸ ರಿಸ ರಿಗ ರಿ ಗ ಗಗ । ರಿಮರಿಮ ಪಪಮಾ ಗರಿಗಾ । ನಿಸನಿ ಸರಿಸ ರಿಮಗ ರೀ, । ಗಾ ರಿ ಸಾನಿ ರೀ,,,, ॥
**ತರಣಿ ಸುತನ ಬಾಣವೆರಗ ದಂ ದದಿ ರಥವ ಧರೆಗೆ ಒ ತ್ತಿದ ದೇ ವನ ತೋರೆ ಬೇಗನೆ**
। ಪನಿನೀನಿದ ನಿ ಸಸಾ ಸಾ । ರಿಗಗಾ ಗಗರಿಗ ರಿಸಸಾ । ಪನಿನಿ ನಿಸಸರಿರಿ ರೀ ರಿರಿ । ಗಾ ರಿ ಸಾನಿ ರೀ,,,, ॥
**ತರಣಿಯ ಮರೆಮಾಡಿ ಶಿರವ ತರಿಯುವಂತೆ ನರಗೆ ಸೂ ಚಿಸಿದಾತನ ತೋರೆ ಬೇಗನೆ**
। ಪಮಪಮ ಗಮ ಗರಿ ಗರಿಸಸ । ಸಸ ಗರೀ, ;;; । ಗಗಗ ಗಾ,ರಿಮಗಾ,, । ಗಾ ಮನಿಪಪ ರಿಗ ರಿಸ ಸಾ । ನೀ ಸ ಸಗರಿಸಾ;; ।
**ತ ರ ಣಿಯೊಡನೆ ಪಂಥವಾಡಿ ತಿರುಗಿದ ತರಳನಾಳಿದ ನ ತೋರಿ ಸೆ ಹೇ ಸಖಿಯೆ ತೋರೆ ಬೇಗನೆ**

। ಮಪಮ ಗರಿಗ ಮಾಪಾ, ಮಾ । ಮಾ ನಿ ದ ಪಾಪಾ,, ಗಗ । ಗಾ ಮಗಮಾಮಾ,ಮಾ, । ಗಮನಿಪಪಮ ಗ ರಿ ಗ ಸಾ, ।
**ವ ರಮುನಿಗಳು ಕೂಡಿ ಸ ರ್ವೋತ್ತಮನಾರೊ ಪರಿ ಶೋಧಿಸಬೇ ಕೆಂ ದು ಭರ ದಿಂದ ಭೃಗು ಮುನಿ**
। ನಿಸ ನಿ ಸರಿ ರಿರೀ, ಗರಿಗ । ಗಮನಿಪ ಗಾ ರಿ ಗ ರಿಸಾ, । ಗಾ ರಿ ಸಾನಿ ರೀ,,,, ।
**ಬಂದು ಕೋಪಿಸೆ ಬೇಗ ಚರ ಣವನೊತ್ತಿದವನ ತೋರೆ ಬೇಗನೆ**
। ಪನಿನಿ ಸಸ ನಿ ಸರೀರೀ, । ಗಮಗ ಮನಿಪಗಾ ರಿಗಸಾ । ಪ ನಿನಿನಿಸ ಸ ಸಾರಿ ರಿ ರೀ । ಗಾ ರಿ ಸರಿಸಗಾ,,,, ।
**ಪರಿಪರಿಯಲಿ ದೇ ವ ಪರಮ ಭ ಕ್ತರ ಕಾ ವ ಸುರರಿಗಭಯವಿ ತ್ತವನ ತೋರೆ ಬೇಗನೆ**
। ಗಮಪನಿನೀ ನಿ ಸದಾಪಾ । ಮಪಮನಿಪಮಗಮಗಾ, । ರಿ ಗರಿ ಗಾಗ ರಿಗ ರಿ ಸಸಾ । ರೀಸ ರಿಮಾಗಾ,,,, ।
**ವರ ವೇಲಾಪುರದಾದಿ ಕೇ ಶ ವ ನ ಮರೆಯಲಾರೆನೆ ಮನದಿ ಹೇ ಸಖಿ ಯೆ**

## ಮಗುವ ತಡೆಯಬಾರದೆ

ಮಗುವ ತಡೆಯಬಾರದೆ ಮಾನಿನಿಯರು
ಸುಗುಣ ಚೆನ್ನಿಗನೆಂಬ ಸೊಬಗುಳ್ಳ ಮಗುವ

ನೀರೊಳಗೆ ಪೊಕ್ಕು ತಾ ಬೀರುತಿದೆ ಮಾತುಗಳ
ಧರಣಿಧರ ತಳಕಿಳಿದು ಬಾರದಿದೆಕೊ
ಘೋರ ಪಾತಕವೆಂಬ ಬೇರ ಮೆಲ್ಲುತಲಿದೆಕೊ
ಬಾರಯ್ಯ ಎನೆ ಕೋಪವೇರುತಿಹ ಮಗುವ

ಬೇಡುತಿದೆ ದಾನವನು ನೀಡುತಿದೆ ಪಾದವನು
ರೂಢಿಪಾಲರ ಕಂಡು ಕೊಲ್ಲುತಿದೆಕೊ
ಓಡುತಿದೆ ಮೃಗದೊಡನೆ ಆಡುತಿದೆ ಕಪಿಗಳೊಳು
ನೋಡಲ್ಕರಿ ನಾಗರ ಹಾವ ತುಳಿಯುತಿದೆಕೊ

ಇತ್ತ ಬಾರೆಂದೆನಲು ಬತ್ತಲೆ ನಿಲ್ಲುತಿದೆಕೊ
ಮತ್ತೆ ತೇಜಿಯನೇರಿ ನಲಿಯುತಿದೆಕೊ
ಹತ್ತೆ ಬಂದವರಿಗೆ ಅರ್ತಿಯನು ನೀಡುತಿಹ
ನಿತ್ಯವೈಕುಂಠದಲಿ ನಲಿವ ಮಗುವ

**ರಾಗ: ಜಯಜಯವಂತಿ** ಸ ರಿ ಗ ಮ ಪ ನಿ ದ ನಿ ಸ ಸ ನಿ ಪ ಮ ಗ ಮ ರಿ ಗ ರಿ ಸ ಆದಿತಾಳ

। ,,ರಿ **ಗಾ**ರಿ ಸಾ । ನಿಸಾ ದಾ,**ನೀ** । ರೀ,,,, ಗಾ । ಮಾಪಾಮಗಮಗ ।
**ಮಗುವ ತ ಡೆಯಬಾ ರ ದೆ ಮಾ ನಿ ನಿ ಯ ರು**

। ರೀ ಗ ಮಾನಿ ದಾ । ನೀಸಾನೀದಾ । ,,ಗ ಮಾಗಮಾ । ರೀ**ಗಾ**ರೀ,, ॥
**ಸುಗು ಣ ಚೆ ನ್ನಿಗ ನೆಂಬ ಸೊಬ ಗುಳ್ಳ ಮಗುವ**

। ,,ರಿ**ಗಾ**ರಿ **ಗಾ** । ಸಾರೀ ನೀಸಾ । ಸಾ ನೀಸ ದ**ನೀ** । ರೀ, ಸ **ಗಾ**ರೀ ।
**ನೀ ರೊಳ ಗೆ ಪೊಕ್ಕು ತಾ ಬೀರುತಿದೆ ಮಾತುಗ ಳ**

। ಗಗಾಗಗಾಗಾ । ಮಗಾಮಗಾಮಾ । ,,ಮಾಗಾಮಾ । ರೀ**ಗಾ**ರೀ,, ।
**ಧರ ಣಿಧರ ತ ಳ ಕಿ ಳಿ ದು ಬಾ ರ ದಿದೆ ಕೊ**

। ,ಗಮಾನಿ ದಾ । ನಿಸಾನಿಸಾಸಾ । ,,ನೀ ನಿ ಸಾ, । ನೀ ಸಾ**ನಿ**ದಾದಾ ।
**ಘೋರ ಪಾ ತಕ ವೆಂ ಬ ಬೇರ ಮೆ ಲ್ಲುತ ಲಿದೆಕೊ**

। ,,ಗಾ,,ಗಾ । ಗಾ,, ಮಗಮಾ । ,,ಗಾ ಮನಿಪಾ । ಮಾಪಾ**ಗಾ**ರೀ ।
**ಬಾ ರ ಯ್ಯ ಎ ನೆ ಕೋಪ ವೇ ರು ತಿ ಹ**

। ,,ರೀ **ಗ** ರಿಗಾ । ಸಾ,ರಿನೀಸಾ । ,,ಗಾಮ ಗಮಾ । ರೀ,ರಿ**ಗಾ**ರೀ ।
**ಬೇಡುತಿದೆ ದಾನವ ನು ನೀಡುತಿದೆ ಪಾದವನು**

। ,,ಗಾ ಮನಿದಾ । ನೀಸಾನಿದಮಾ । ,,ಮಾಗಾಮಾ । ರೀ**ಗಾ**ರೀ,, ।
**ರೂಢಿಪಾ ಲ ರ ಕಂ ಡು ಕೊ ಲ್ಲ ತಿ ದೆಕೊ**

। ,,ನೀಸ ದ**ನೀ** । **ಗ** ರೀರಿ ರೀರೀ । ,,ರೀಗ ಮಪಾ । ಗಮಾರಿ**ಗಾ** ರೀ ।
**ಓಡುತಿದೆ ಮೃಗ ದೊಡ ನೆ ಆಡುತಿ ದೆ ಕಪಿ ಗಳೊಳು**

। ,,ಗಮಾನಿದಾ । ನಿಸಾ,**ನಿ**ದಾಮಾ । ಗಾ ಗಾಮ ಗಮಾ । ರೀ ಮಾ**ಗಾ**ರೀ ।
**ನೋಡಲ್ ಕರಿ ನಾ ಗ ರ ಹಾವ ತುಳಿ ಯುತಿ ದೆಕೊ**

। ,,ಗಮಾ ಗಮಾ । ರೀ,**ಗ** ರೀಸಾ । ,,ಸಾ,ದ **ನೀ** । ರೀ,ಸ ರಿ**ಗ** ರೀ ।
**ಇತ್ತ ಬಾ ರೆಂದೆನಲು ಬ ತ್ತಲೆ ನಿ ಲ್ಲುತಿದೆಕೊ**

। ,,ಗಗಾ ಗಾ, । ಮಗಾಮಗಾಮಾ । ,,ಮಾ**ನೀ**ಪಾ । ಮಾಪಾ**ಗಾ**ರೀ ।
**ಮತ್ತೆ ತೇ ಜಿಯನೇ ರಿ ನಲಿಯು ತಿ ದೆಕೊ**

। ,,ಗಮಾ **ನಿ**ದಾ । ನೀ,ಸನೀಸಾ । ನೀ,ನಿ ನೀ ನೀ । ನೀಸ **ನೀ**ದಾ ।
**ಹತ್ತೆ ಬಂ ದ ವಂ ಗೆ ಅ ರ್ತಿಯನು ನೀಡುತಿ ಹ**

। ,,ಗಾ,ಗ ಗಾ । ಗಾ,ಮಗಾಮಾ । ಗಮಗಮ**ನಿ**ಪನಿಪ । ಮಾಪಾ**ಗಾ**ರೀ ।
**ನಿ ತ್ಯ ವೈ ಕುಂಠದ ಲಿ ನ ಲಿ ವ ಮ ಗುವ**

## ಮರವ ನುಂಗುವ ಪಕ್ಷಿ

ಮರವ ನುಂ ಗುವ ಪಕ್ಷಿ ಮನೆಯೊಳಗೆ ಬಂದಿದೆ– ಅದರ
ಕುರುಹ ಕೇಳಿ ಕುಳಿತಿರುವ ಜನರು

ಒಂಟಿ ಕೊಂಬಿನ ಪಕ್ಷಿ ಒಡಲೊಳಗೆ ಕರುಳಿಲ್ಲ
ಗಂಟಲು ಮೂರುಂಟು ಮೂಗು ಇಲ್ಲ
ಕುಂಟು ಮನುಜನ ತೆರದಿ ಕುಳಿತಿಹುದು ಮನೆಯೊಳಗೆ
ಎಂಟು ಹತ್ತರ ಭಕ್ಷ ಭಕ್ಷಿಸುವುದು

ನಡುವೆ ಕಲಿಯುಂಬುವುದು ನಡುನೆತ್ತಿಯಲಿ ಬಾಯಿ
ಕಡು ಸ್ವರಗಳಿಂದ ಗಾನ ಮಾಡುವುದು
ಅಡವಿಯಲಿ ಹುಟ್ಟುವುದು ಅಂಗವೆರಡಾಗುವುದು
ಬಡತನ ಬಂದರೆ ಬಹಳ ರಕ್ಷಿಪುದು

ಕಂಜವದನೆಯರ ಕರದಲ್ಲಿ ನಲಿದಾಡುವುದು
ಎಂಜಲುಣಿಸುವುದು ಮೂಜಗಕೆ
ರಂಜಿಪ ಶಿಖಾಮಣಿ ಸಿಂಹಾಸನದ ಮೇಲಿರ್ಪ
ಸಂಜೀವ ಪಿತ ಆದಿಕೇಶವನೆ ಬಲ್ಲ

ರಾಗ: ಗೌರೀವಿನೋದಿನಿ ಸ ರಿ ಗ ಪ ದ ಸ ಸ ನಿ ದ ಪ ಗ ರಿ ಸ ಖಂಡ ಛಾಪು

। ,,ಗ ಗಾಗ ಗಾ । ರಿ ಗ ಸಾಸಾ । ,,ನಿ ಸಾನಿ ದಪ । ದಸಸಾಸ ।
**ಮರವ ನುಂ ಗುವ ಪಕ್ಷಿ ಮನೆಯೊಳಗೆ ಬಂದಿದೆ ।**

। ,,ಸರೀಗ ಪಪ । ದಸ ದದಪ । ,,ರಿ ಗಾರಿ ಸ ಸ । ರಿಗರೀ, ।
**ಅದರ ಕುರು ಹ ಕೇ ಳಿ ಕುಳಿ ತಿರುವ ಜನರು**

। ದಪಪ ದಪ । ಗಸ ರಿಗಪ । ,,ದದಾದ ದಪ । ದನಿ ದದಪ ।
**ಒಂಟಿ ಕೊಂ ಬಿನ ಪ ಕ್ಷಿ ಒಡ ಲೊಳಗೆ ಕರುಳಿ ಲ್ಲ**

। ,,ಪಾ,ದಸಾ । ನೀ ದಾ ಪ । ,,ಗಾ, ಸ ರಿಗ । ರೀ,,, ।
**ಗಂ ಟಲು ಮೂರುಂಟು ಮೂಗು ಇ ಲ್ಲ**

। ,,ಗಾ, ಗ ಗ ಪ । ದಪ ದಪಪ । ,,ರಿಗಾರಿಸ ಸ । ರಿ ಗರಿ ರಿರಿ ।
**ಕುಂಟು ಮನು ಜನ ತೆರದಿ ಕುಳಿತಿಹುದು ಮನೆಯೊಳಗೆ**

। ,,ಗಾ,ಗ ಪಾ । ದ ಸ ದಪಪ । ,,ಗಾ,ರಿ ಗ ರಿ । ಸಾ,,, ।
**ಎಂಟು ಹ ತ್ತರ ಭ ಕ್ಷ ಭ ಕ್ಷಿಸುವು ದು**

। ಗಪ ಪ ದಪ । ರಿಗ ರಿ ಸ ಸ । ದಸ ಸಾಸ । ರಿ ಗ ರೀ ರಿ ।
**ನಡುವೆ ಕಲಿ ಯುಂಬುವುದು ನಡುನೆ ತ್ತಿ ಯಲಿ ಬಾಯಿ**

। ರಿಗ ರಿ ಗ ರಿ । ಸಾರಿಸದ । ದಾದ ಸಾ । ರಿ ಗ ರೀ, ।
**ಕಡು ಸ್ವರಗ ಳಿಂ ದ ಗಾನ ಮಾ ಡುವುದು**

। ಗಪಗ ಪ ಪ । ದಾಸ ದ ಪ । ಸಾ ಸನಿದ । ನೀ ದ ಪ ಪ ।
**ಅಡವಿಯಲಿ ಹುಟ್ಟುವುದು ಅಂಗವೆರ ಡಾಗುವುದು**

। ಪದಪದಪ । ಗರಿಗರೀ । ಗ ರಿ ಸ ನಿದ । ಸಸ ಸಾ, ।
**ಬಡತನ ಬಂದರೆ ಬಹಳ ರ ಕ್ಷಿಪುದು**

। ಸಾ ಸನಿದ । ನಿದ ನಿ ದಪ । ದಾಪ ಗಸ । ರೀಗ ರಿ ರಿ ।
**ಕಂಜವದ ನೆಯರ ಕರ ದ ಲ್ಲಿ ನಲಿ ದಾಡುವುದು**

। ಗಾ ಗ ರಿ ಗ । ರಿ ಸ ಸಾ, । ದಸದಸಾ । ರಿ ಗರೀ, ।
**ಎಂಜಲುಣಿ ಸುವುದು ಮೂ ಜಗಕೆ**

। ಸಾ ರಿ ಗ ಪ । ಪಾಪ ಪ ದ । ದಾದ ಸಸ । ರೀ ಸನಿದ ।
**ರಂಜಿಪ ಶಿ ಖಾಮಣಿ ಸಿಂ ಹಾಸನದ ಮೇಲಿ ರ್ಪ**

। ಪದಪದಪ । ರಿಗ ಸಾಸ । ದಸರಿಗ ಪ । ಗಾರೀ, ।
**ಸಂ ಜೀ ವ ಪಿತ ಆದಿ ಕೇ ಶವನೆ ಬಲ್ಲ**

## ಯಾಕೆ ನೀನಿಲ್ಲಿ ಪವಡಿಸಿದೆ ಹರಿಯೆ

ಯಾಕೆ ನೀನಿಲ್ಲಿ ಪವಡಿಸಿದೆ ಹರಿಯೆ–ಜಗ
ದೇಕ ವಿಖ್ಯಾತ ಪಶ್ಚಿಮ ರಂಗಧಾಮ

ತಮನೊಡನೆ ಹೋರಿ ಬೆಟ್ಟವನು ಬೆನ್ನಲಿ ಪೊತ್ತು
ರಮಣಿ ಭೂಮಿಯನು ತಂದಾಯಾಸವೊ
ಅಮರ ವೈರಿಯ ಕರುಳ ಕಿತ್ತ ಕಡು ಧಾವತಿಯೊ
ಕ್ಷಮೆಯನಳೆದೀ ಪಾದಕಮಲ ನೊಂದವೊ

ಪೊಡವಿಪಾಲಕರ ವಂಶವನು ವಪನ ಮಾಡಿ
ಕೊಡಲಿಯನು ಬಿಸಿಟು ಮಲಗಿದ ಭಾವವೊ
ಮಡದಿಯನು ಕದ್ದೊಯ್ದವನ ಶಿರವನೆ ತರಿದು
ಒಡಲಿನಾಯಾಸದಲಿ ಪವಡಿಸಿದ ಪರಿಯೋ

ಖೂಳ ಶಿಶುಪಾಲಾದಿ ಎದುರಾಂತ ವೀರರ ಕೊಂದು
ಕಾಳಿಂಗದ ಹೆಡೆಯ ತುಳಿತುಳಿದು ಮೈಯಲಸಿತೊ
ಲೀಲೆಗೋಸುಗ ಬಂದು ನಿರ್ವಾಣದಲಿ ನಿಂದು
ಆ ಲಜ್ಜೆಗಾಗಿ ತಲೆ ಬಾಗಿ ಮಲಗಿದೆಯೊ

ನಾಲ್ಕು ಯುಗದಾಧಾರಿ ಕಡೆಗೆ ತುರಗವೇರಿ
ಸಾಕಾಗಿ ದಣಿದು ನೀನಿಲ್ಲಿ ಮಲಗಿದೆಯೊ
ಸಾಕಾರಿಯಾಗಿ ಗೌತಮ ಮುನೀಶ್ವರನಿಗೆ
ನೀಕೊಟ್ಟ ವರಕೆ ಮಲಗಿದೆಯೊ

ಇನ್ನೆಷ್ಟು ಕಾಲ ನೀನಿಲ್ಲಿ ಮಲಗಿದರೂ
ನಿನ್ನನೆಬ್ಬಿಸುವವರನೊಬ್ಬರನು ನಾಕಾಣೆ
ಉನ್ನತ ಕಾಗಿನೆಲೆಯಾದಿಕೇಶವರಾಯ
ಚೆನ್ನ ಶ್ರೀರಂಗಪಟ್ಟಣದ ರಂಗಧಾಮ

ರಾಗ: ಚಂಪಾಕಲಿ ಸ ಗ² ಮ¹ ಪ ನಿ² ಸ ಸ ನಿ² ದ² ಪ ಮ¹ ಗ² ರಿ² ಸ ಆದಿತಾಳ

। ,,,ಪಾ,ಮಾ । ಗಾ,ರೀ,ಸಾ। ,,ನಿಸಾಗಮಾ । ಪಾ ಪನೀದಪಾ (ಪಾ,,,ಮಪಾ)।
ಯಾಕೆ ನೀ ನಿ ಲ್ಲಿ ಪವಡಿಸಿ ದೆ ಹರಿಯೆ (ದೆ ಜಗ )
। ನೀ,ನೀ, ನೀ । ಸಾ,ಸಾ, ಸಾ । ನಿದಾ ಪಾ,ಮಗ । ಮಾ,,ಪಾ,, ।
ದೇಕ ವಿ ಖ್ಯಾತ ಪ ಶ್ಚಿಮ ರಂಗ ಧಾ ಮ

। ಪಪಾನಿ ನೀನಿ । ಸಾ, ಸಾ, ಸಾ । ನಿಸಾನೀ, ಪಾ । ನಿನೀ ಸಾ,ಸಾ ॥ ನಿಸಾ ನೀ, ಪಾ । ಮಾಪಮಗಾ,, । ,,ರಿಗಾಸಾ, । ಗಾ,,ಮಾಪಾ ॥
ತಮನೊಡನೆ ಹೋರಿ ಬೆ ಟ್ಟವನು ಬೆ ನ್ನಲಿ ಪೊತ್ತು ರಮಣಿ ಭೂ ಮಿಯನು ತಂ ದಾ ಯಾಸ ವೊ
। ;ಪಮಾಪ ನೀ । ಸನೀ ಸಸಾಸಾ । ನಿಸಾನೀ ಪಾಮಾ । ಪಮಾಗಮಾಪಾ ॥ ;ನೀದಾಪಾ । ಮಾಪಾಗಾ,, । ಗಾ ರಿ ಸನೀಸಾ । ಗಾ,,ಮಾಪಾ ।
ಅಮರ ವೈ ರಿಯ ಕರುಳ ಕಿ ತ್ತ ಕ ಡು ಧಾ ವತಿ ಯೊ ಕ್ಷ ಮೆಯ ನ ಳೆ ದೀ ಪಾದಕಮಲ ನೊಂದ ವೊ

। ;ಪಮಾಗಸಾ । ಗಗಾಗಾ, ಮಾ । ಪಮಾಪಾ, ಪಾ । ಪಮಾ ಪಾ,ಪಾ । ;ಪ ಪಾನಿನೀ । ದಾ,ಪದಾಪಾ । ,,ಮಪಾಮಗಾ । ಮಾ,,ಪಾಪಾ ।
ಪೊಡವಿಪಾ ಲಕ ರ ವಂ ಶವ ನು ವ ಪನ ಮಾಡಿ ಕೊಡಲಿಯ ನು ಬಿಸಿ ಟು ಮಲ ಗಿ ದ ಭಾ ವ ವೊ
। ಸ ಸಾಗಗಾ ಗಾ । ಮಾ,ಮಾ,ಮಾ । ಮಪಮಗಾಗಾ । ಮಾ,ಪಪಾಪಾ । ;ಪನೀನಿನೀ । ಪಾ, ನಿಪಾಮಾ । ;ಮಪಾಮಗಾ । ಮಾ,ಪಪಾಪಾ ।
ಮಡದಿಯನು ಕ ದ್ದೊಯ್ದ ವ ನ ಶಿರವ ನೆ ತರಿ ದ ಒಡಲಿನಾ ಯಾಸದ ಲಿ ಪವ ಡಿ ಸಿ ದ ಪರಿ ಯೋ
। ;ಪಾ ಪ ನಿನೀ । ಸಾ,,ಸಾಸಾ । ನಿಸಾನೀ, ಪಾ । ನೀನಿನಿ ಸಾ ಸಾ ॥ ನಿಸಾನೀಪಪಾ । ಮಪಾಮ ಗಾಗಾ । ರಿಗಾರೀ, ಸಾ । ಗಾಮಾಪಾಪಾ ।
ಖೂಳ ಶಿಶು ಪಾ ಲಾದಿ ಎದುರಾಂತ ವೀರರ ಕೊಂದು ಕಾ ಳಿಂಗದ ಹೆ ಡೆಯ ತುಳಿ ತುಳಿದು ವೈ ಯಲ ಸಿ ತೊ
।,,ಮಗಾಮಪಾ । ನಿನೀನೀ,ನೀ । ಸಾ,ನೀ,ಪಾ । ಸನೀಸಾ,ಸಾ ॥ ಗರೀನೀ,ನೀ । ಪಾ,ನಿದಾಪಾ । ಮಾ,ಪ ಮಾಗಾ । ಮಾಮಾಪಾ,, ।
ಲೀಲೆಗೋ ಸುಗ ಬಂದು ನಿರ್ವಾಣ ದಲಿ ನಿಂದು ಆ ಲಜ್ಜೆ ಗಾಗಿ ತಲೆ ಬಾಗಿ ಮ ಲ ಗಿ ದೆಯೊ

। ;ಪಾಮ ಗ ಸಾ । ಗಾ,ಮಾ,ಮಾ । ಪಮಾಪಾ, ಪಾ । ಪಮಾಪಾ,ಪಾ । ;ಮಪಾನೀನಿ । ದದಾಪ ದಾಪಾ । ;ಮಪಾ ಮಗಾ । ಮಾಮಾಪಾ; ।
ನಾಲ್ಕುಯುಗ ದಾಧಾ ರಿ ಕ ಡೆ ಗೆ ತು ರಗ ವೇ ರಿ ಸಾ ಕಾಗಿ ದಣಿದು ನೀ ನಿ ಲ್ಲಿ ಮಲ ಗಿ ದೆ ಯೊ
। ನೀ,ನೀ,ನೀ । ಸಾ, ಸ ಸಾ,, । ನೀನೀ,, ಪಾ । ದಾ,ಪಪಾಪಾ । ಮಾ,ಪದಾಪಾ । ಮಪಾ ಮಗಾರೀ । ಸಗಾರೀ, ನೀ । ಸಾಗಾಮಾಪಾ ।
ಸಾ ಕಾ ರಿ ಯಾಗಿ ಗೌ ತಮ ಮು ನೀ ಶ್ವರ ಗೆ ಬೇ ಕೆಂ ದು ನೀ ಕೊ ಟ್ಟ ವರಕೆ ಮ ಲ ಗಿ ದೆ ಯೊ
। ಮಾ,ಪಾ,ನೀ । ಸಾ,ಸಾ,ಸಾ । ,,ನಿ ಸಾನಿಪಾ । ನೀ, ನಿನೀನೀ ॥ ನಿಸಾನೀ,ಪಾ । ಮಪಾಮಗಾಗಾ । ರಿ ಗಾರಿಸಾಗಾ । ಮಾ,,ಪಾ,, ।
ಇ ನ್ನೆ ಷ್ಟು ಕಾ ಲ ನೀ ಮಲಗಿ ದ ರೂ ಹರಿಯೆ ನಿ ನ್ನ ನೆ ಬ್ಬಿಸು ವ ವ ರ ನೊಬ್ಬರನೂ ಕಾ ಣೆ
। ,,ಮಗಾಮಪಾ । ನೀನೀನೀನೀ । ಸಾ, ನೀ,ಪಾ । ಸನೀಸಾ,ಸಾ ॥ ಗರೀನೀ, ನೀ । ಪಾನೀದಾಪಾ । ಮಾಪಾ ಮಾಗಾ । ಮಾ,,ಪಾ,, ।
ಉ ನ್ನತ ಕಾಗಿ ನೆಲೆ ಯಾದಿ ಕೇ ಶವ ರಾಯ ಚೆ ನ್ನ ಶ್ರೀ ರಂಗ ಪ ಟ್ಟ ಣ ದ ರಂ ಗ ಧಾ ಮ

## ಯಾತರವನೆಂದುಸುರಲೀ

ಮುಟ್ಟು ಹುಟ್ಟಿನೊಳು ನೆಟ್ಟನೆ ನಾ ಬಂದೆ
ತೊಟ್ಟಿದ್ದೆನಾಗತೊಗಲಬಕ್ಕಣ
ಇಷ್ಟರೊಳಗೆಒಂದು ವಿವರವರಿಯದಿಂದ
ಭ್ರಷ್ಟಗೆ ನನಗಿನ್ಯಾತರ ಕುಲವಯ್ಯ

ಇಂದ್ರಿಯ ಸೂತಕ ದುರ್ಗಂಧದ ಮಲಮೂತ್ರ
ನಿಂದ ಕಾವಲಿ ತನ್ನ ನಿಜವರಿಯದೆ
ಬಂದದ್ದು ಬಚ್ಚಲಗುಣಿ ತಿಂದದ್ದು ಪೊಲೆ ಮಾಂಸ – ಇಂಥ
ಅಂಧಕಗೆ ನನಗಿನ್ಯಾತರ ಕುಲವಯ್ಯ

ಯಾತರವನೆಂದುಸುರಲೀ–ಜಗ
ನ್ನಾಥ ಮಾಡಿದ ಒಂದು ನರರೂಪವಯ್ಯ

ಒಂಬತ್ತು ಎಜ್ಜದೊಳೊಸರುವ ಹೊಲಸದು
ತುಂಬಿ ತುಳುಕುವ ಕೊಡವಾಗಿರಲು

ಇಂಬಿಲ್ಲದೆ ಹೊಲೆಗೊಂಡ ಠಾವಿನಲಿ ಬಂದಂಥ
ಡಂಬಕ ನನಗಿನ್ಯಾತರ ಕುಲವಯ್ಯ

ಕರುಳು ಕಂಡ ನಾರುವ ಚರ್ಮ ರೋಹಿತ
ನರಪಂಜರದಿ ಹುರುಳಿಲ್ಲದ
ನರದೇಹ ಹೊತ್ತು ತಿರುಗದಂಥ
ತಿರುಕ ನನಗಿನ್ಯಾತರ ಕುಲವಯ್ಯ

ಹಚ್ಚಡದ ಮೇಲೆ ಲಚ್ಚಿಕೆ ಇಟ್ಟಂತೆ
ಹೆಚ್ಚು ಕಡಮೆ ಎಂದು ಹೆಣಗಾಡುತ
ನಿಚ್ಚ ನೆಲೆಯಾದಿಕೇಶವನ ಭಜಿಪ
ಹುಚ್ಚಗೆ ನನಗಿನ್ಯಾತರ ಕುಲವಯ್ಯ

**ರಾಗ: ಕೀರವಾಣಿ** ಸ ರಿ² ಗ² ಮ¹ ಪ ದ¹ ನಿ² ಸ + **ಗ²** ದ² **ಆದಿತಾಳ/ತೀನ್‌ತಾಲ್**

**ಸಾಖಿ**

। ಗಾ ಗ  ಗಾ ಗ ಗ  ಗಾ,,  ರೀರಿ ಸನಿ ಸರಿ ರೀ,,ರೀ,, । ಪಾ ನೀನಿ ಸಾ ಸ  ಗ  ರಿಗ  ಸರಿಸಸಾ,,, ।
**ಮುಟ್ಟು ಹುಟ್ಟಿನೊಳು  ನೆಟ್ಟನೆ  ನಾ ಬಂ ದೆ   ತೊಟ್ಟಿದ್ದೆನಾಗ ತೊಗಲ ಬ ಕ್ಕಣ**

। **ಗಾಗಗ  ಗಗ** ಮಗಮ ರಿಮಮಮಮನಿಪ  ಗಾ ರೀ,,, । ಗಾ ಗ ಗಾ ರಿಗಸಾನೀ ನಿನಿ  ಸ ಸಸಾಸಾ,,, ।
**ಇಷ್ಟರೊಳಗೆ ಒಂ ದು ವಿವ ರ ವ ರಿಯದಿಂದ   ಭ್ರಷ್ಟಗೆ ನನಗಿ ನ್ಯಾತರ ಕುಲವಯ್ಯ**

। ಮಾಮಮ  ಮಾಮಮಾ,  ಮಾಮಾ ಮಗ  ಮಪ ಪಾ  ಪಾ । ದಾದ ದಾದದ ಪಾಪ  ಮಪಮಗಗ  ಮಪಾ,, ।
**ಇಂ ದ್ರಿಯ ಸೂತ ಕ   ದು ರ್ಗಂಧದ ಮಲಮೂತ್ರ  ನಿಂದ ಕಾವಲಿ ತ ನ್ನ  ನಿ ಜವ ರಿಯದೆ**

। ಪದನೀನಿ  ಸಾಸ ಸ ನಿಸಾ,, ಸನಿದಾಪ   ಮ ಗ ಪಮ ಗಾ,, । ಗಾ ಗಾ,, ರೀ ಗ ರಿಸ  ನಿದನಿನಿಸಾ ರಿಗ  ರಿ ಸ ರಿಸಸಾ,, ।
**ಬಂದದ್ದು ಬ ಚ್ಚಲ ಗುಣಿ  ತಿಂದ ದ್ದು  ಮೊಲೆ ಮಾಂಸ   ಇಂಥ  ಅಂಧಕಗೆ ನನಗಿ  ನ್ಯಾತರ ಕುಲವ ಯ್ಯ**

। ,,,ಪಾ  ದಪಮಾ । ಗರೀಸ ನೀಸಾ । ಮಗಾ;;, । ,,,,ಗಾಮಾ ॥ ಪನೀ,ನೀ ಸಾ । **ದದಾ** ಪಾ,ಪಾ । ಮಪಾಮನೀಪಾ । ಗಪಮಪಗಮಗಾ ॥
**ಯಾತರವ   ನೆಂ ದುಸುರ   ಲೀ      ಜ ಗ   ನ್ನಾ ಥ ಮಾ ಡಿದ ಒಂದು  ನ ರ ರೂ ಪ   ವ    ಯ್ಯ**

। ,,,ಗಾ ರೀಗ । ಸಾರೀನೀ ಸಾ । ,,ನಿಸಾನಿ ದಾ । ನೀ  ನೀಸಾಸಾ ॥ ,,ಗಾ  ಗ  ಗಾ ಗ । ಗರಿಮಗ ಗರಿರಿಸ । ರಿಸನಿಸಾರಿಮಾ । ಗಾ,,,,,, ॥
**ಒಂಬತ್ತು ಎಜ್ಜದೊಳು   ಒಸರುವ   ಹೊಲಸದು   ತುಂಬಿ ತುಳು ಕು ವ  ಕೊಡ  ವಾ   ಗಿರ   ಲು**

। ,,ಗಮಾಪನೀ । ನೀನೀ, ಸ  ನೀ  । ಪಾ, ಮಾ,ಗರಿ । ಗಾ,ಮಪಾಪಾ ॥ ಪಾ,ಪಾ,ಪಾ  ಮಗಪಮಮಗಗಾ ರಿಗರಿಗಸಾ ನಿನಿ ಸ ರಿರೀರಾ,,,,
**ಇಂ  ಬಿ   ಲ್ಲದೆ ಹೊಲೆ   ಗೊಂಡ ತಾ    ವಿ ನ ಲಿ   ಬಂ ದಂಥ   ಡಂ    ಬ ಕ  ನನಗಿ ನ್ಯಾತರ ಕುಲವಯ್ಯ**

। ,,ಪಮಾಗ  ಪಾ । ಪಾ ಗಮಾಗ ಗಾ । ,,,ಸಾ,,ನೀ   । ರೀ,, ರೀರೀ ॥ ,,ಗಗಾಗಾ, । ಗಪಮಪಗಮಗಾ । ,,ಗಾರೀಸಾ । ನೀಸಾರೀ,, ॥
**ಕರು ಳು ಕಂ   ಡ ನಾ  ರುವ    ಚ  ರ್ಮ  ರೋಹಿತ    ನರಪಂ   ಜ  ರ ದಿ       ಹುರುಳಿ     ಲ್ಲದ**

। ,,ಗಮಾಪನೀ । ಸಾ, ಸಾ, ಸಾ । ,,ನೀದಾಪಾ । ಗಾಮಾಗಾ,, ॥ – ನಿನೀನಿ ಸಸರೀಗಾ ಗಗ ರಿಸರಿಸಸಾ,,,
**ನರ  ದೇ   ಹ  ಹೊತ್ತು   ತಿ ರು ಗ   ದಂ   ಥ      ತಿರುಕ ನನಗಿನ್ಯಾತರ ಕುಲವಯ್ಯ**

। ,,ಪಾ,ಮಗಾ । ಪಾ, ಪಾ,ಪಾ । ದಾ,ಪಮಾ । ದಾ,ದಾ,ದಾ । ,,ನೀಸ  ನಿಸಾ । ದಾ, ಪಾ,ಪಾ । ಗ ಗಾಮಾ,ಗಾ । ಪಾ,, ,,,, ॥
**ಹ ಚ್ಚಡ   ದ  ಮೇಲೆ   ಲ ಚ್ಚಿಕೆ   ಇ ಟ್ಟಂತೆ   ಹೆಚ್ಚು ಕಡ  ಮೆ ಎಂದು  ಹೆಣ ಗಾ ಡು  ತ**

। ,,ಪಾದಾನೀ । ನಿನೀಸಾ, ಸಾ । ,,ರಿಗಾರಿಸಾ । ನಿಸಾ ದದಾಪಾ ॥ ,,ಪಾ,ದಪಾ । ,,ಗಮಾಗಾ । ,,ರೀ ಸನೀ । ರಿ ರಿರೀ,ರೀ   ।
**ನಿ ಚ್ಚ    ನೆಲೆಯಾದಿ    ಕೇ ಶವ  ನ  ಭಜಿಪ    ಹುಚ್ಚಗೆ    ನನ  ಗಿ    ನ್ಯಾತರ   ಕುಲವ ಯ್ಯ**

## ವ್ಯರ್ಥವಾಯಿತಲ್ಲ ಜನ್ಮವು

ವ್ಯರ್ಥವಾಯಿತಲ್ಲ ಜನ್ಮವು  ಸಾರ್ಥಕವಾಗಲಿಲ್ಲ

ಅರ್ಥದಾಸೆಯಲಿ ಪೃಥ್ವಿಯೊಳಗೆ ಸುತ್ತಿ
ಮತ್ತನಾಗಿ ಬಲು ಕೃತ್ಯಗಳನು ಮಾಡಿ

ಹರಿಯ ನೆನೆಯಲಿಲ್ಲ ಹರುಷದಿ ಗರುವ ಪುಟ್ಟಿತಲ್ಲ
ಪರಮ ಮೂಢರಲಿ ನಿರುತ ಸಂಗವ ಮಾಡಿ
ಗುರುಹಿರಿಯರ ದಯೆ ದೊರೆಯದೆ ಸುಮ್ಮನೆ

ಏನು ಪೇಳಲೇನು ಎನಗೆ ಹೀನ ಬಿಡದು ಮುನ್ನ
ಶ್ವಾನಗಿಂತಲು ಮಾನಗೆಟ್ಟು ನಾ
ದೀನನಾಗಿ ಮನೆ ಮನೆಗಳ ತಿರುಗಿ

ಭಾಗವತರ ಪಾದಕ್ಕೊಂದಿನ ಬಾಗಿ ನಡೆಯಲಿಲ್ಲ
ರಾಗರಂಗು ಭಕ್ತಿಭಾವದೊಳು
ಬೀಗಿ ಚೆನ್ನಕೇಶವನನು ನೆನೆಯದೆ

**ರಾಗ: ಕನಕಮಣಿ** ಸ ರಿ ಮ ಪ ದ ಸ   ಸ ದ ಪ ಮ ಗ ರಿ ಸ **ಆದಿತಾಳ**

। ಸ̇ಾಸ̇  ದದಮಪಮ । ಮಾ,,ಗಾರಿ ಸ । ಸಾರಿ  ಪಮಗರಿಗ । ರಿಸಸಾ,,,, ।
**ವ್ಯರ್ಥವಾಯಿತ  ಲ್ಲ  ಜನ್ಮವು  ಸಾರ್ಥಕವಾ ಗ  ಲಿ ಲ್ಲ**
। ಸಾರಿ  ಮಾಮಮಮ । ಪಾಮಪ  ದದ ದ ದ । ಸ̇ಾಸ̇ ದಾದ ಮಮ । ಪಾದಪಮಪ  ದ  ದ ।
**ಅರ್ಥದಾ ಸೆ ಯಲಿ  ಪೃಥ್ವಿಯೊಳಗೆ  ಸುತ್ತಿ  ಮತ್ತನಾಗಿ  ಬ ಲು  ಕೃತ್ಯಗಳ ನು ಮಾಡಿ**

। ಪದಪ  ಮಪದ ಸ̇ಾ । ಸ̇ಾ,, ದ ಸ̇ ಸ̇ ಸ̇ । ಪದ ಪ ಮಪಪಪಾ । ಪಾ,, ,,,, ।
**ಹರಿಯ ನೆ ನೆಯಲಿ  ಲ್ಲ  ಹರುಷದಿ  ಗರುವ  ಪು  ಟ್ಟಿತ  ಲ್ಲ**
। ಪದದ  ಪದ  ದದದ । ಪದ ದ ಪ ದಪ  ಮ ಮ । ಪ ದ ದದಪ ಮ ಮಮ । ಮ ಮಪ ಮ ಪಾದ  ದ ॥
**ಪರಮ  ಮೂಢರಲಿ  ನಿರುತ ಸಂಗವ  ಮಾಡಿ  ಗುರುಹಿರಿಯರ  ದಯೆ  ದೊರೆಯದೆ  ಸು ಮ್ಮನೆ**

। ಮಾಗ  ರಿಸರಿಪಾ । ಮಾ,, ಮಮಮಾ । ದಾದ ಪದ ಪ  ಮಾ । ಮಾ,, ,,,, ।
**ಏ ನು ಪೇಳಲೇ  ನು  ಎ ನ ಗೆ  ಹೀನ ಬಿಡದು ಮು  ನ್ನ**
। ಸ̇ಾ  ಸ̇ಸ̇ಾಸ̇ಸ̇ಾ । ದಾ ಮಪಾಪ  ಪಾ । ಸಾರಿಮಾಮ ಗ  ಗ । ಪ ದಪಮ ಪದದಾ ।
**ಶ್ವಾನಗಿಂತಲು  ಮಾನ ಗೆ ಟ್ಟು ನಾ  ದೀನನಾಗಿ  ಮನೆ  ಮನೆಗಳ  ತಿರುಗಿ**

। ಪಾ,ಮಗರಿರೀ । ಮಗಮಗರೀ  ಸಸ । ಸಾ ರಿ ಮಮಮಪದ । ಪಾ,, ,,,, ।
**ಭಾಗ ವತರ  ಪಾ  ದ  ಕ್ಕೊಂದಿನ  ಬಾಗಿ ನ ಡೆಯಲಿ  ಲ್ಲ**
। ದಾ,ದಸ̇ಾಸ̇ಾ  । ರ̇ೀರ̇ಿ  ಸ̇ಾ ಸ̇ ಸ̇  ಸ̇  । ಸ̇ಾಸ̇ ದಾದಪಾ । ದಪದಪ  ಮಪದ  ದ ।
**ರಾ  ಗರಂಗು  ಭಕ್ತಿ ಭಾವದೊಳು  ಬೀಗಿ ಚೆ ನ್ನಕೇ  ಶವನನು ನೆ ನೆಯದೆ**

## ಸಂಸಾರ ಸಾಗರವ

ಸಂಸಾರ ಸಾಗರವನುತ್ತರಿಸುವಡೆ
ಕಂಸಾರಿ ನಾಮವೊಂದೆ ಸಾಕು ಮರುಳೆ

ಯತಿಯಾಗಬೇಡ ನೀ ವೈರಾಗ್ಯವನೆ ಪಿಡಿದು
ಸತತ ವ್ರತವ ಮಾಡುವೆನೆಂಬ ಹಮ್ಮು ಬೇಡ
ಶೃತಿ ಸ್ಮೃತಿಯರಿತು ನಡೆವೆನೆಂಬ ಚೇಷ್ಟೆಯು ಬೇಡ
ರತಿಪತಿಪಿತನ ನಾಮವೊಂದೆ ಸಾಕು ಮರುಳೆ

ತನುವ ದಂಡಿಸಿ ತುದಿಯ ಕೋಡುಗಲ್ಲಿನ ಮೇಲೆ
ವನಿತೆಯನು ಬಿಟ್ಟು ತಪವಿರಲು ಬೇಡ
ಅನುದಿನವು ನೀರೊಳಗೆ ಮುಳುಗಿ ನಡುಗಲು ಬೇಡ
ವನಜನಾಭನ ನಾಮ ನೆನೆ ಕಂಡ್ಯಾ ಮರುಳೆ

ತೀರ್ಥಯಾತ್ರೆಯ ಮಾಡಿ ಬಹುವಿಧದಲಿ ಬಳಲಿ ಕೃ
ತಾರ್ಥನಾದೆನೆಂಬುವ ಹೆಮ್ಮೆ ಬೇಡ
ಪಾರ್ಥಸಾರಥಿ ಕಾಗಿನೆಲೆಯಾದಿಕೇಶವನ
ಕೀರ್ತನೆಯ ಮಾಡಿ ಭಕುತಿಯ ಹುಡ್ಡು ಮರುಳೆ

ರಾಗ: ಹರಿಕಾಂಭೋಜಿ ಸ ರಿ ಗ ಮ ಪ ದ ನಿ ಸ ತಿಶ್ರ ತ್ರಿಪುಟ ತಾಳ

ಪಾದಾ । ಸಾ, ,,,, ।,,, ,,,, । ಸಾರಿ ಸಾ ರೀ । ಸಾ,ನಿದಪ । ಪಾದ ನೀದಾ । ಪಾ, ,,,, ।
**ಓ ಹೊ ಹೊ ಓ ಹೊಹೊ ಓ ತಾನಿ ತಾನಿ ನಾ**
। ಪಾ,ಮಗರೀ । ಪಾ, ಮಗರೀ । ಸಾಸ ರೀಸಾ । ಸಾ, ,,,, । ಸಾಸ ರೀಸಾ । ಸಾ ಸ ಪಾಪಾ । ಸಾಸ ರೀಸಾ । ಸಾ, ,,,, ।
**ಲೇ ಲೇಸು ಲೇ ಲೇ ಸು ಲೇಸು ಲೇಸು ಲೇ ತಾನಿ ತಾನಿ ತಂದನಾನಾ ತಾನಿ ತಾನಿ ನಾ**

। ಪದನೀದಾ । ಪಾದಪಮಮಾ । ಗ ಗಾರೀಸಾ । ರೀ, ,,,, ।
**ಸಂ ಸಾರ ಸಾಗರವ ನು ತ್ತರಿ ಸುವ ಡೆ**
। ಮಾ,ಮಾಮಾ । ಪಾಪ ಪಾ ದ । ನೀನಿ ದಪದಪ । ಪಾ,(ದಪಮಾ) ।
**ಕಂ ಸಾ ರಿ ನಾಮ ವೊಂದೆ ಸಾಕು ಮ ರು ಳೆ**

। ಪ ಪಾದಸ ಸಾ । ದಸಸ ಸಾ,, । ಸಾ,ರಿ ಸ ಸ । ಪದನಿ ದಪಪಾ ।
**ಯತಿ ಯಾಗ ಬೇಡ ನೀ ವೈರಾಗ್ಯವ ನೆ ಪಿಡಿದು**
। ಪಪದ ಪ ಪಮಾ । ಗ ಮಗ ರಿಸರೀ । ದಾದ ಪಾ,, । ಪಾ, ,,,, ।
**ಸತತ ವ್ರತವ ಮಾಡುವೆನೆಂಬ ಹಮ್ಮು ಬೇ ಡ**
। ರಿ ರೀ ರೀ ರೀ । ರಿ ರಿರಿ ರಿಸಾರಿ । ಗಾ ಗ ರಿಸರಿ ಸ । ಸಾ,ನಿದಪಾ ।
**ಶೃತಿ ಸ್ಮೃತಿ ಯರಿತು ನಡೆ ವೆ ನೆಂಬ ಚೇಷ್ಟೆಯು ಬೇಡ**
। ಸಸರಿ ಪಪಪಪ । ಪಾಪ ಮಗ ರೀ । ಸಾಸ ರಿಸರಿಸ । ಸಾ, ,,,, ।
**ರತಿಪತಿಪಿತನ ನಾಮವೊಂದೆ ಸಾಕು ಮರು ಳೆ**

। ದನಿ ದ ಪಾಪಪ । ದ ನಿ ದ ಪಾ ಪಾ । ರೀ,ರೀಸಾ । ಸಾ, ಸಾ,, ।
**ತನುವ ದಂಡಿಸಿ ತುದಿಯ ಕೋಡು ಗ ಲ್ಲಿನ ಮೇಲೆ**
। ಸಸಾರಿಪಪಾ । ಪಾ, ಮಗರೀ । ಪಪಾದನಿದಾ । ಪಾ,ಪಾ,, ।
**ವನಿ ತೆ ಯ ನು ಬಿ ಟ್ಟು ತಪ ವಿರಲು ಬೇಡ**
। ಮಮಾಮಮಮಾ । ಗಮಗರಿ ಸಸಾ । ಪ ಪಪ ದನಿ ದಪ । ಪಾ,ಪಾ,, ।
**ಅ ನು ದಿ ನ ವು ನೀ ರೊಳಗೆ ಮುಳುಗಿ ನಡುಗಲು ಬೇ ಡ**
। ಮಮಾಮಾಮಾ । ಗಗಾ ರಿಸಸಾ । ನಿಸಾ ರೀ ಸಾ । ಸ ಸಾಸಾ,, ।
**ವ ನ ಜ ನಾ ಭನ ನಾಮ ನೆನೆ ಕಂಡ್ಯಾ ಮರುಳೆ**

। ಗಾ ಗ ರಿಸ ರಿ ಸ । ರೀ ರೀ, ಸ ಸ । ರಿಗಾಮಾಗಾ । ಪಪಾಪಾ ಪಾ ।
**ತೀರ್ಥಯಾತ್ರೆಯ ಮಾಡಿ ಬಹು ವಿಧ ದ ಲಿ ಬಳ ಲಿ ಕೃ**
। ದಾನಿ ದಾನೀ । ದಾನಿದಪಮಾ । ಪದನಿ ದಾಪಾ । ಪಾ, ,,,, ।
**ತಾರ್ಥನಾದೆ ನೆಂ ಬು ವ ಹೆ ಮ್ಮೆ ಬೇ ಡ**
। ಪಾ,ದಾ ಸಾ । ರಿರೀ ರೀರೀ । ಸರೀಗಾ ಗಾ । ರೀ,ಸಸಾ ।
**ಪಾರ್ಥಸಾ ರಥಿ ಕಾಗಿ ನೆಲೆಯಾದಿ ಕೇ ಶವನ**
। ಸಾಸನಿ ದಪಾ । ಪದ ಪ ಮಗ ರಿರಿ । ಗಾ ಗ ರಿಸರಿಸ । ಸಾ, ,,,, ।
**ಕೀ ರ್ತನೆಯ ಮಾಡಿ ಭ ಕುತಿಯ ಹೊಂದು ಮರು ಳೆ**

# ಸಾಲದೆ ನಿನ್ನದೊಂದು ದಿವ್ಯ ನಾಮ

ಸಾಲದೆ ನಿನ್ನದೊಂದು ದಿವ್ಯ ನಾಮ–ಅ
ಕಾಲ ಮೃತ್ಯುವಿನ ಗಂಟಲಗಾಣ ಹರಿಯೆ

ರಣದೊಳಗೆ ಅಂಗಾಂಗ ಖಂಡತುಂಡಾಗಿ ಪ್ರತಿ
ರಣವನುತ್ತರಿಸಿ ಮರಣವ ತಾಳಿರೆ
ಪ್ರಣವ ಗೋಚರ ನೀನು ಗೋಚರಿಸಿ ಬಂದೆನ್ನ
ಹೆಣಕೆ ಪ್ರಾಣವ ಪ್ರಯೋಗಿಸಿದಂತಾರಾತ್ಮ

ಕುಂತದಿ ತೂತು ಗೊಂಡೆನ್ನ ಬೆನ್ನಿಂದಿಳಿದ
ಸಂತತ ನೆತ್ತರನೊರೆಸಿ ಬಿಸುಟೆ
ತಿಂತ್ರಿಣಿಯ ಮರದಡಿಯ ಹಾವು ಕಡಿದೊರಗಿರಲು
ಮಂತ್ರಿಸಿ ಮನೆಗೆ ಕಳುಹಿದ ಗರುಡಗಮನ

ಕ್ಷೀಣ ದೇಹವ ಬಿಡುವೆನೆಂದು ಪಾಡಂಬಟ್ಟು
ತ್ರಾಣದಲಿ ಗರಳ ತೈಲವ ಸೇವಿಸೆ
ವೇಣುನಾದದಲಿ ಹಣೆಯ ನೇವರಿಸಿ ಪಂಚ
ಪ್ರಾಣ ಪ್ರತಿಷ್ಠೆಯ ಮಾಡಿದೆ ಮಹಾತ್ಮ

ತಮ್ಮ ಹವಣನರಿಯದ ಕೊಬ್ಬಿದ ಪಿಶಾಚಿಗಳು
ತಮ್ಮ ಮನೆಗೊಂದೆ ಸಮ ಕಲ್ಲಲಿಟ್ಟು
ಹೆಮ್ಮಕ್ಕಳ ಬಾಧಿಸುವುದನು  ಕಂಡು
ಬೊಮ್ಮಜಟ್ಟಿಗರ ಶಿರವರಿದ ನಾರಹರಿಯೆ

ಓದಿ ಹೇಳಿದರೊಂದು ಕಥೆಯಾಗುತಿದೆ ಮಹಾಂ
ಬೋಧಿಶಯನನೆ ವೇದ ಶಾಸ್ತ್ರ ಮುಖದಿ
ಬಾಧಿಸುವ ದುರಿತಾಗ್ನಿಗಂಬು ಶ್ರೀಕಾಗಿನೆಲೆ
ಯಾದಿಕೇಶವ ನಾಮ ಸಂಕೀರ್ತನ

**ರಾಗ: ಕಮಲ** ಸ ಗ೨ ಮ೧ ದ೨ ನಿ೩ ಸ **ಆದಿತಾಳ**

। ,,,ಸಾ,ನೀ । ದನಿದನಿ ಮಾಮಾ । ಗಮಾಗಾ, ಸಾ । ಗ ಮಾ,ಮಾ ಗಾ ॥ ಮದಾದಾ, ಮಾ । ದ ನೀನೀ, ಸಾ । ನಿಸಾದಾ,ಮಾ । ಗಾಸಾಗಾ,, ।
**ಸಾಲ ದೆ ನಿ ನ್ನ ದೊಂದು ದಿ ವ್ಯ ನಾ ಮ ಅ ಕಾ ಲ ಮೃ ತ್ಯುವಿ ನ ಗಂ ಟಲ ಗಾ ಣ ಹ ರಿಯೆ**

। ಮಮಾಮ ಮಾಮಾ । ದಾ,ಮಾ,ಮಾ । ಗಮಾದಾ,ಮಾ । ದಾನಿ ಸಾ,ಸಾ । ನಿಸಾನಿ ದಾ,, । ದಾದಾಮಾ,, । ಗಾಮಾಗಾಸಾ । ಗಾ,,ಮಾಮಾ ।
**ರ ಣ ದೊಳ ಗೆ ಅಂಗಾಂ ಗ ಖಂ ಡ ತುಂ ಡಾಗಿ ಪ್ರ ತಿ ರಣವ ನು ತ್ತ ರಿ ಸಿ ಮರ ಣ ವ ತಾ ಳಿ ರೆ**
। ಗಮಾದಾ,ಮಾ । ದನೀಸಾ,ಸಾ । ನಿಸಾನಿದಾದಾ । ನೀ,ಸಾ,ಸಾ । ನಿಸಾನಿ ಸಾ,, । ದಾದಾ ಮಾಮಾ । ಗಮಾಗಾ,ಸಾ । ಗಾಮಾದಾ,, ।
**ಪ್ರಣವ ಗೋ ಚರ ನೀನು ಗೋಚರಿ ಸಿ ಬಂದೆ ನ್ನ ಹೆಣಕೆ ಪ್ರಾ ಣವ ಪ್ರಯೋ ಗಿಸಿ ದಂತ ರಾ ತ್ಮ**

। ,,ನಿಸಾನಿದಾ । ನಿಸಾಸ ಸಾ,, । ಸಗಾಗಾ, ಗಾ । ಮಾ,ಮಮಾಮಾ । ,,ಮದಾದದಾ । ನಿದನಿದದಮಮಾ । ,,ಮಾಗಾಸಾ । ಗಾಗಾಮಾ,, ॥
**ಕುಂತದಿ ತೂತು ಗೊಂ ಡೆ ನ್ನ ಬೆ ನ್ನಿಂ ದಿ ಳಿ ದ ಸಂ ತತ ನೆ ತ್ತ ರ ಒ ರೆ ಸಿ ಬಿ ಸುಟೆ**
। ಗಮಾದ ದಾದಾ । ಮದಾನಿನೀನೀ । ಸಾ,ಸ ನೀದಾ । ನಿ ಸಾಸಸಾಸಾ । ,,ನಿಸಾನಿಸಾ । ದ ನಿನೀ ದಾದಾ । ಮಾಗಾ ಸಾಗಾ । ಸಾಗಮದಾದಾ ।
**ತಿಂ ತ್ರಿಣಿ ಯ ಮರ ದಡಿಯ ಹಾವು ಕ ಡಿ ದೊರ ಗಿರ ಲು ಮಂತ್ರಿಸಿ ಮನೆಗೆ ಕ ಳು ಹಿ ದ ಗ ರು ಡಗ ಮನ**

। ,,,ಗಾಗ ಗಾ । ಮಮಾ ಮಗಾಮಾ । ಗಮಾಮಾ, ಗಮ । ದಾ,ದಾ,ದಾ । ,,ಗಾಮಗಸಾ । ,,,ಗಗಾಗಾ । ಮಾ,,ಮಾಮಾ । ದಮದಮಗಾಗಾ ।
**ಕ್ಷೀಣ ದೇ ಹ ವ ಬಿಡು ವೆ ನೆಂ ದು ಪಾ ಡಂಬ ಟ್ಟು ತ್ರಾಣದಲಿ ಗರಳ ತೈ ಲ ವ ಸೇ ವಿ ಸೆ**
। ,,ಗಾ ಮದಾದ । ನಿನೀ ಸಸಾಸಾ । ,,ನಿಸಾನಿದಾ । ಸಾ, ಸಾ,ಸಾ । ,,ನಿಸಾಗ ಸಾ । ನಿಸನಿಸನೀದಾ । ಗಮಗಮರೀಸಾ । ಮಾಗಮದಾದಾ ।
**ವೇಣುನಾದ ದಲಿ ಹಣೆಯು ನೇ ವರಿ ಸಿ ಪಂಚ ಪ್ರಾಣ ಪ್ರ ತಿ ಷ್ಠೆಯ ಮಾ ಡಿದೆ ಮ ಹಾ ತ್ಮ**

। ನೀಸಾ ನೀದಾ । ಸಾಸಸಾಸಸಾ । ಗಾ,ಮಮಾ ಮಾ । ದಾ,ದದಾದಾ । ,,ಗಾಮ ದ ದಾ । ದಾ ನೀ ದಾದಾ । ,,,ನೀ,ದಾ । ಸಾ,,ಸಾ,, ॥
**ತಮ್ಮ ಹವ ಣನರಿಯದ ಕೊಬ್ಬಿದ ಪಿ ಶಾ ಚಿಗ ಳು ತ ಮ್ಮ ಮನೆ ಗೊಂದೆ ಸ ಮ ಕ ಲ್ಲ ಲಿ ಟ್ಟು**
। ,,ಸಾ,ಸಾ, । ನಿಸನಿಸ ದಾ,, । ನಿದನಿದಮಾಮಾ । ಗಸಾ ಗಾ,ಗಾ, । ಮದಾದಾ,ಮಾ । ದನಿಸಾಸಾ,, । ನಿಸಾನಿದಾದಾ । ನಿನೀಸಸಾಸಾ ।
**ಹೆಮ್ಮ ಕ್ಕ ಳ ಬಾ ಧಿ ಸು ವು ದ ನು ಕಂಡು ಬೊ ಮ್ಮಜ ಟ್ಟಿ ಗ ರ ಶಿರ ವರಿ ದ ನರ ಹರಿಯೆ**

। ,,ಗಾಮ ಗಾ । ಗಸಾಗಾ, ಗಾ । ಗಮಾದಾ, ದಾ । ದನಿನೀ ನಿದದಾ । ,,ಸಾ, ನಿದಾ । ನಿ ಸಾನಿ ಸಾ,ಸ । ದಾ,ನಿ ದಾ ನೀ । ದಾ,, ,,,, ।
**ಓದಿ ಹೇ ಳಿದರೊಂದು ಕಥೆ ಯಾಗು ತಿ ದೆ ಮಹಾಂ ಬೋಧಿಶ ಯನನೆ ವೇದ ಶಾಸ್ತ್ರ ಮುಖ ದಿ**
। ಗಾ,ಮಗಾಸಾ । ಗ ಗಾಮಾ,ಮಾ । ಗಮಾದ ದನಿಸಾ । ದಾನಿಸಾಗಾ ॥ ಮಾ,ಗಸಾ,, । ನಿಸಾದಾ,ದಾ । ಗಮಾದಾ,ನೀ । ಸಾ,,,,,, ।
**ಬಾಧಿ ಸುವ ದುರಿ ತಾ ಗ್ನಿ ಗಂ ಬು ಶ್ರೀ ಕಾ ಗಿನೆಲೆ ಯಾದಿಕೇ ಶವ ನಾ ಮ ಸಂ ಕೀ ರ್ತ ನ**

## ಸ್ನಾನವ ಮಾಡಿರೊ ಜ್ಞಾನತೀರ್ಥದಲ್ಲಿ

ಸ್ನಾನವ ಮಾಡಿರೊ ಜ್ಞಾನತೀರ್ಥದಲ್ಲಿ
ಮಾನವರೆಲ್ಲ ಮೌನದೊಳಗೆ ನಿಂದು

ತನ್ನ ತಾನರಿತುಕೊಂಬುದೆ ಒಂದು ಸ್ನಾನ
ಅನ್ಯಾಯ ಮಾಡದಿರುವುದೊಂದು ಸ್ನಾನ
ಅನ್ನದಾನವ ಮಾಡುವುದೊಂದು ಸ್ನಾನ–ಹರಿ
ನಿನ್ನ ಧ್ಯಾನವೆ ನಿತ್ಯ ಗಂಗಾಸ್ನಾನ

ಪರಸತಿಯ ಭ್ರಮಿಸದಿದ್ದರೆ ಒಂದು ಸ್ನಾನ
ಪರನಿಂದೆಯ ಮಾಡದಿದ್ದರೊಂದು ಸ್ನಾನ
ಪರೋಪಕಾರ ಮಾಡುವುದೊಂದು ಸ್ನಾನ
ಪರತತ್ವವನರಿತುಕೊಂಬುದೆ ಒಂದು ಸ್ನಾನ

ಸಾಧು ಸಜ್ಜನರ ಸಂಗವೆ ಒಂದು ಸ್ನಾನ
ಭೇದಾಭೇದವಳಿದಡೆ ಒಂದು ಸ್ನಾನ
ಆದಿಮೂರುತಿ ಕಾಗಿನೆಲೆಯಾದಿಕೇಶವನ
ಪಾದಧ್ಯಾನವೆ ನಿತ್ಯ ಗಂಗಾಸ್ನಾನ

ರಾಗ: ದೇಶ್ ಸ ರಿ೨ ಮ೧ ಪ ನಿ೩ ಸ ಸ ನಿ೨ ಪ ದ೨ ಮ೧ ಗ೩ ರಿ೨ ಗ೩ ನಿ೩ ರಿ೨ ಸ ಆದಿತಾಳ

। ,,ಮಾ,ಗರೀ । ಮಗಗರಿಸ ನಿಸಾ । ,,,ರೀ ಮ ಪಾ । ,,ನೀದಾಪಾ ।
ಸ್ನಾ ನವ ಮಾ ಡಿರೊ ಜ್ಞಾನ ತೀ ರ್ಥದಲ್ಲಿ
। ,,ರೀ ಮಪನೀ । ಸಾ,ಸಾ, ಪದ । ಪದಾಮ ಮಾಮಾ । ಮಗಪಮಮಗರಿಗ । ಸಾ
ಮಾನ ವ ರೆ ಲ್ಲ ಮೌ ನ ದೊಳ ಗೆ ನಿಂ ದು

। ಪಾ,ಪಾ ಮಾ । ರಿಮಾಗ ರೀ,, । ನಿ ಸಾ ಮರೀಮಾ । ಪಾ,,ಪಾ,, ।
ತ ನ್ನ ತಾ ನರಿ ತುಕೊಂ ಬುದೆ ಒಂ ದು ಸ್ನಾ ನ
। ರಿಮಾಪಸಾಸಾ । ಪನೀದಪಾಮಾ । ರಿಗಸಾ,, ಸಾ । ರಿಗಮಗರೀ,, ।
ಅ ನ್ಯಾ ಯ ಮಾಡದಿ ರು ವು ದೊಂದು ಸ್ನಾ ನ
। ,,ರೀ,ಮಪನೀ । ನಿನೀ ಸಾ, ಸಾ । ಸರಿಸರಿನೀನೀ । ಪನೀದ ಮಾಪಾ ।
ಅ ನ್ನದಾ ನವ ಮಾಡು ವು ದೊಂದು ಸ್ನಾ ನ ಹ ರಿ
। ,,ಪಸನೀಸಾ । ಪಾನೀದಾಪಾ । ಮಾಗ ನೀ,ಸಾ । ,ರಿಗಮಗರೀ, ।
ನಿ ನ್ನ ಧ್ಯಾ ನ ವೆ ನಿ ತ್ಯ ಗಂಗಾ ಸ್ನಾ ನ

। ನಿಸಾರಿರೀರೀ । ರಿ ಮಾಗಸಾ,, । ನಿಸಾ ನೀ,ಪಾ । ನೀ,,ಸಾ,, ।
ಪರಸತಿಯ ಭ್ರಮಿ ಸದಿ ದ್ದರೆ ಒಂದು ಸ್ನಾ ನ
। ನಿಸಾರೀ,ರೀ । ರಿಮ ಗಾ, ರೀ । ರೀರಿಮಾ,ಮಾ । ಪಾ,,ಪಾ,, ।
ಪರ ನಿಂದೆ ಯ ಮಾಡ ದಿದ್ದರೊಂದು ಸ್ನಾ ನ
। ರಿಮಪನೀ,ನೀ । ನಿಸಾಸ ಸಾ,, । ನಿ ಸಾನೀ, ಪಾ । ನೀ,,ಸಾ,, ।
ಪ ರೋಪ ಕಾ ರ ಮಾ ಡುವುದೊಂದು ಸ್ನಾ ನ
। ನಿಸಾರೀ,ರೀ । ನಿಸಾನಿದಪಾ । ರೀ, ಗ ನೀ, ಸಾ । ರೀ,,ರೀ,, ।
ಪರ ತ ತ್ವ ವ ನರಿತು ಕೊಂಬುದೊಂದು ಸ್ನಾ ನ

। ,,ಮಾಮ ಮಾ । ಪಪಾಪ ಪಾ,, । ಪದಾ ಮಾ,ಗಾ । ಪಾ,,ಪಾ,, ।
ಸಾ ಧು ಸ ಜ್ಜನರ ಸಂ ಗವೆ ಒಂದು ಸ್ನಾ ನ
। ,,ರಿಮಾಪನೀ । ನೀ, ಸನೀಸಾ । ನಿಸಾ ನೀ,ಪಾ । ನೀ,,ಸಾ,, ।
ಭೇ ದಾ ಭೇದವಳಿ ದಡೆ ಒಂದು ಸ್ನಾನ
। ,,ಪಾ,ಪನೀ । ಸಾರೀ ರೀರೀ । ರಿಗಾಸಾ, ನೀ । ಸಾ,ಸಸಾ,ಸಾ ।
ಆ ದಿಮೂ ರುತಿ ಕಾಗಿ ನೆಲೆಯಾದಿ ಕೇಶವ ನ
। ,,,ಸನೀಸಾ । ಪದಪದಮಾಗಾ । ರೀಗ ನೀ,ಸಾ । ರಿಗಮಗಗರೀ, ।
ಪಾ ದ ಧ್ಯಾ ನ ವೆ ನಿತ್ಯ ಗಂಗಾ ಸ್ನಾ ನ

## ಹೂವ ತರುವರ ಮನೆಗೆ

ಹೂವ ತರುವರ ಮನೆಗೆ ಹುಲ್ಲ ತರುವೆ
ಆವ ಪರಿಯಲಿ ಸಲಹೊ ದೇವ ಚಿನ್ಮಯನೆ

ಈರೇಳು ಜನ್ಮದಿಂ ದಾಸನಾಗಿಹೆ ನಾನು
ಸೇರಿದೆನೊ ತವ ಶರಣರ ಸೇವೆಗೆ
ಘೋರ ದುರಿತಗಳೆಂಬ ವಾರಿಧಿಯ ಬತ್ತಿಸಿ
ನಾರಸಿಂಹನೆ ಕಾಯೊ ನಮ್ಮ ಕುಲ ಸ್ವಾಮಿ

ರಂಗನಾಥನೆ ನಿನ್ನ ಡಿಂಗರಿಗನೋ ನಾನು
ಡಂಗುರವ ಹೊಡಿಸಯ್ಯ ದಾಸನೆಂದು
ಭಂಗ ಪಡಿಸದೆ ನಿನ್ನ ಶರಣರೊಳಗಿಂಬಿಟ್ಟು
ಗಂಗೆ ಜನಕನೆ ಕಾಯೋ ಚರಣಕ್ಕೆ ಶರಣು

ಎಷ್ಟು ಮಾಡಲು ನಿನ್ನ ಬಂಟನೋ–ವೈಷ್ಣವರ
ಹುಟ್ಟು ದಾಸಿಯ ಮಗನು ಪರದೇಶಿಯೋ
ಸೃಷ್ಟಿಗೊಡಯ ಕಾಗಿನೆಲೆಯಾದಿಕೇಶವನೆ–ಕೈ
ಬಿಟ್ಟೆಯಾದೆ ನಿನಗೆ ಹರಿದಾಸರಾಣೆ

**ರಾಗ: ಜಯಜಯವಂತಿ** ಸ ರಿ ಗ ಮ ಪ ನಿ ದ ನಿ ಸ ಸ ನಿ ದ ಪ ಮ ಗ ಮ ರಿ ಗ ರಿ ಸ **ಆದಿತಾಳ**

। ಸಾ ಸ ಪದಪದ । ಮಗ ರಿಗರಿಗಸಾ । ನೀ ಸ ರಿಮಗಮ । ರೀ(ಮಪನಿ) ॥
**ಹೂವ ತ ರು ವ ರ ಮನೆ ಗೆ ಹುಲ್ಲ ತ ರು ವ**
। ರೀಮ ಪಪ । ನಿ ನಿ ಸನಿ ಸ । ನಿಸರೀರೀ ನಿದ । ಪದಪದಮಗರಿಗರೀ ।
**ಆವ ಪರಿ ಯಲಿ ಸಲಹೊ ದೇ ವ ಚಿನ್ ಮ ಯ ನೆ**

। ಮಗರಿಗಸ । ಮರಿಮಪಾ । ಮಾಪನಿದ । ಪದ ಮದಪ ॥
**ಈ ರೇಳು ಜ ನ್ಮದಿಂ ದಾ ಸನಾ ಗಿಹೆ ನಾ ನು**
। ನೀನಿ ನಿ ನಿ । ದನಿ ದಪಪ । ಮಪ ನೀನಿ । ಸಾ,,, ॥
**ಸೇರಿದೆನೊ ತವ ಶರಣ ರ ಸೇವೆ ಗೆ**
। ನಿಪ ಪ ರಿ ರಿ । ರಿರಿರೀ ರಿ । ರಿಮಗರಿ ಗ । ನೀರಿಸಾ ॥
**ಘೋರ ದುರಿ ತಗಳೆಂಬ ವಾ ರಿಧಿಯ ಬತ್ತಿಸಿ**
। ನಿಸರಿನಿಸ । ನಿದ ಪದಪ । ಮಾಪ ನಿ ನಿ । ಸಾಸಾ, ॥
**ನಾರಸಿಂ ಹನೆ ಕಾಯೊ ನ ಮ್ಮ ಕುಲ ಸ್ವಾಮಿ**

। ಮಾಪನಿದ । ಪದ ಮದಪ । ಮಾಪನಿದ । ಪದ ಮದಪ ।
**ರಂ ಗನಾ ಥನೆ ನಿ ನ್ನ ಡಿಂ ಗರಿಗ ನೋ ನಾ ನು**
। ನೀ ದ ಪದ । ಮ ಗ ರಿಗರಿ । ನೀ ಸರಿಮ । ಗರೀ,, ।
**ಡಂಗುರವ ಹೊಡಿಸ ಯ್ಯ ದಾಸನೆಂ ದು**
। ನಿಪಪ ರಿರಿ । ರಿರಿ ರೀರಿ । ರಿಮಗ ರಿ ಗ । ನೀ ರಿಸಾ ॥
**ಭಂಗ ಪಡಿ ಸದೆ ನಿ ನ್ನ ಶರ ಣರೊಳ ಗಿಂಬಿಟ್ಟು**
। ನಿಸರಿ ನಿ ಸ । ನಿದ ಪದಪ । ಮಪನೀನಿ । ಸನಿಸಾ, ॥
**ಗಂಗೆ ಜನ ಕನೆ ಕಾ ಯೋ ಚ ರಣಕ್ಕೆ ಶರಣು**

। ಮಗರಿ ಗಸ । ಮರಿ ಮಾಪ । ಮಾಪನಿದ । ಪದಮದಪ ॥
**ಎ ಷ್ಟು ಮಾ ಡಲು ನಿ ನ್ನ ಬಂಟನೋ ವೈಷ್ಣವರ**
। ನೀ ನಿ ನೀ । ದನಿ ದ ಪಪ । ಮಪ ನೀನಿ । ಸಾ,,, ॥
**ಹುಟ್ಟು ದಾ ಸಿಯ ಮಗನು ಪ ರದೇಶಿ ಯೋ**
। ನಿಪಪ ರಿ ರಿ । ರಿ ರಿ ರಿರಿ ರಿ । ರಿಮಗರಿಗ । ನಿರಿಸ ಸಾ ॥
**ಸೃ ಷ್ಟಿಗೊಡ ಯ ಕಾಗಿನೆಲೆ ಯಾದಿಕೇ ಶವನೆ ಕೈ**
। ನಿಸರಿ ನಿಸ । ನಿದ ಪದಪ । ಮಪನೀನಿ । ಸಾಸಾ, ॥
**ಬಿ ಟ್ಟೆಯಾ ದೆ ನಿನಗೆ ಹರಿದಾಸ ರಾಣೆ**

# ಹೆತ್ತ ತಾಯಿಗಿಂತ ಅತ್ಯಧಿಕ ಮಾಯವುಂಟೆ

ಹೆತ್ತ ತಾಯಿಗಿಂತ ಅತ್ಯಧಿಕ ಮಾಯವುಂಟೆ
ಉತ್ತಮ ಅಶ್ವವ ಕತ್ತೆ ಹೋಲುವುದುಂಟೆ

ವಿತ್ತವುಳ್ಳವನ ಕುಲ ಎಣಿಸುವುದು ಉಂಟೆ
ಸ್ವಾರ್ಥಕ್ಕೆ ನ್ಯಾಯ ಎಂದಾದರೂ ಉಂಟೆ

ಅತ್ತೆ ಮನೆ ಸೇರುವಾಗ ಅಭಿಮಾನ–ವುಂಟೆ
ಬತ್ತಲೆ ತಿರುಗುವವಗೆ ಭಯವು ಇನ್ನುಂಟೆ

ಪೃಥ್ವಿಯೊಳಗೆ ಕಾಗಿನೆಲೆಯಾದಿ ಕೇಶವನ
ಮರ್ತ್ಯದೊಳು ಅನ್ಯ ದೇವರು ಸರಿಯುಂಟೆ

**ರಾಗ: ಮಧುವಂತಿ** ಸ ಗ೨ ಮ೨ ಪ ನಿ೨ ಸ ಸ ನಿ೨ ದ೨ ಪ ಮ೨ ಗ೨ ರಿ೨ ಸ **ರೂಪಕ ತಾಳ**

। ಪಮಪ ಮಗಗ । ರಿಗಸಾ ಸಾ । ನಿ ನಿದ ನೀ ನಿ । ಸಾ, ಸಗಾ ।
**ಹೆ ತ್ತ ತಾ ಯಿ ಗಿಂತ ಅ ತ್ಯಧಿಕ ಮಾಯ ವುಂಟೆ**

। ಸಾ,ಗ ಗಾ । ಮಾಮಪಾ, । ಮಾಪಾ ಪಾ । ಮಪ ಗಮಗಾ ।
**ಉ ತ್ತಮ ಅ ಶ್ವವ ಕ ತ್ತೆ ಹೋ ಲುವುದುಂಟೆ**

। ಪಾಪಾ ನೀ । ಸ ಸಸ ಸ ನೀ । ಸನಿ ಸ ನಿ ದಾ । ನೀ, ಸಾ, ।
**ವಿ ತ್ತ ವು ಳ್ಳವನ ಕುಲ ಎಣಿಸುವುದು ಉಂಟೆ**

। ನಿಸದಾಪಾ । ಪಮಪಗಾ, । ರಿಗರಿಸಾ ನಿ । ರೀ ರೀ ರೀ
**ಸ್ವಾರ್ಥಕ್ಕೆ ನ್ಯಾ ಯ ಎಂ ದಾದ ರೂ ಉಂಟೆ**

। ಸಾಗ ರಿ ಸಾ । ನೀ ದ ನೀ ಸ । ಸ ರಿ ಸರಿಸನಿ । ಸಗಾರೀ, ।
**ಅತ್ತೆ ಮನೆ ಸೇರುವಾಗ ಅಭಿಮಾನ ವುಂಟೆ**

। ನೀದ ನೀ, । ನಿಸ ಸ ಸ ಸಸ । ಗ ಗ ಗಾ ರಿಸ । ಗಪಮಗಾ, ।
**ಬತ್ತಲೆ ತಿರುಗುವವಗೆ ಭಯವು ಇ ನ್ನುಂ ಟೆ**

। ಪಾಪ ನಿ ನಿನಿ । ಸಾಸಾನಿನಿ । ಸನಿ ಸನಿದಾ । ನಿನಿಸಾ,, ।
**ಪೃಥ್ವಿಯೊಳಗೆ ಕಾಗಿನೆಲೆ ಯಾದಿ ಕೇ ಶವನ**

। ನೀ ಸ ದ ಪಾ । ಮಪ ಪಮಗಗ । ರಿಗರಿಸಾಸನಿ । ರೀ,,,, ।
**ಮರ್ತ್ಯದೊಳ ನ್ಯ ದೇ ವರು ಸರಿ ಯುಂ ಟೆ**